ತನುವನಿತ್ತ ಮಹಾತ್ಮ ಬಸವಂ
ಗನಿತಜಕೊಳು ಪ್ರಭು ಮೆಚ್ಚಿ ಮಾ ಮಾ
ಯೆನುತ ಭಕ್ತಾನೀಕವತಿಶಯುವೆನುತ ಕೀರ್ತಿಸಲು ।
ಘನ ದಯಾಮತಿಯಿಂದೆ ಹೋ ಹೋ
ಯೆನುತ ಭಾಪುರೆ ಭಕ್ತಿದೀಪಕ
ವಿನಯಭಕ್ತಿಧುರೀಣ ಭಾಪುರೆ ಭಾಪುರೇ ಬಸವ ॥ ೨೮ ॥

ಎಂದು ಮುಂಡಾಡುತ್ತ ನಾನಾ
ಛಂದದಲಿ ಕೊಂಡಾಡೆ ಬಸವಂ
ವಂದಿಸುತ್ತತಿ ಭಕ್ತಿಯಲಿ ಮನವೊಲಿದು ಕೈಮುಗಿದು ।
ನಿಂದು ಶಾಶ್ವತಮೂರ್ತಿ ಪರಮಾ
ನಂದ ಪರ ಪರಮೇಶ ಸದ್ಗುಣ
ವೃಂದ ಭಕ್ತಿಸುಮಾನ ಮುಕ್ತಿನಿಧಾನ ಸರ್ವಜ್ಞ ॥ ೨೯ ॥

ಪ್ರಭುವೆ ಜಂಗಮಲಿಂಗಭಕ್ತ
ಪ್ರಭುವೆ ಸಂಗಮದೇವ ವಿಶ್ವ
ಪ್ರಭುವೆ ಮತ್ಪ್ರಮಥಾಗ್ರಗಣ್ಯ ಅಗಣ್ಯಪುಣ್ಯಾಂಗ ।
ವಿಭುವೆ ಬಿನ್ನಪವವಧರಿಸು ನಿಮ
ಗಭಿಮತಾರೋಗಣೆಯನೆಯ್ದಿಸಿ
ಸಭರಿತಾರ್ಥದಿ ಮಾಡುವಂತಹ ಭಕ್ತನೇ ನಾನು ॥ ೩೦ ॥

ಮಣಿಯದಂಜದೆ ನಿಮಗೆಯಾರೋ
ಗಣೆಯನೆಯ್ದಿಸಿ ನೀಡಲೆನ್ನ ಪ
ವಣೆ ಕೃಪಾನಿಧಿಯೆನುತ ಕೀರ್ತಿಸಲಲ್ಲಮಂ ಮೆಚ್ಚಿ ।
ಪ್ರಣಯ ಕರುಣದಿ ನೋಡಿ ಚಿಂತಾ
ಮಣಿ ಸುರಭಿಸಂತಾನತತಿಯಿಂ
ಗಣದೊಳಿರೆ ತನ್ನ ಪ್ರಸಾದವನಿಕ್ಕಿ ಮುಂತಾಡಿ ॥ ೩೧

ನುತಮಥನಸಂವಿತ್ಸುಖೈಕಾ
ಮೃತರಸಾನುಭವಾಂಬುರಾಶಿಯೊ
ಳತಿಶಯದಿನೋಲಾಡಿಸಲು ಭಂಡಾರಿ ಬಸವಣ್ಣ ।
ಅತುಳಿತಾಮಳಲಿಂಗತತ್ವ
ಸ್ಥಿತಿಯನೆಲ್ಲವನಱಿದು ಸಂತೋ
ಷಿತಹೃದಯದಿಂದಲ್ಲಮನ ದಿವ್ಯಾನುಭಾವದಲಿ ॥ ೩೨ ॥

## ೪. ಜಗತ್ರಯಕೆ ಬೀಱುವೀತನ ಘನವುಹಿಮೆ

ಒಂದು ದಿನವಾ ಬಸವರಸನೊಲ
ವಿಂದಸಮ ಭಕ್ತಿಪ್ರಭಾವದೊ
ಳೊಂದಿ ಜಂಗಮಪೂಜೆಯಂ ಮಾಡಲ್ಕೆ ತಸ್ಕರರು ।
ಬಂದಿಯಂ ಹಿಡಿಯಲು ಬಯಸಿ ಭರ
ದಿಂದೆ ಭಕ್ತರ್ಗಲ್ಲದೀತನ
ಮಂದಿರದೊಳನ್ಯರ್ಗೆ ವರ್ತಿಸಬಾರದೆಂದೆನುತ ॥ ೧ ॥

ಕರಿಯ ಬದನೆಯ ಕಾಯಿಗಳನಂ
ಬರದ ಸೆಱಗಿಂ ಪುದಿದು ಬಿಗಿದೀ
ಶ್ವರನ ಭಕ್ತರ ತೆಱದಿ ಬಂದಾ ಬಸವನಂ ಕಂಡು ।
ಹಿರಿದು ಭಯದಿಂ ನಮಿಸಿ ಕಂಗಳ
ನರಳ್ಚಿ ಲಿಂಗೈಕ್ಯರುಗಳಲ್ಲದ
ನರರಿಗಭವನಭವನದೊಳು ತಾನೆಂತು ಹುಗಬಹುದು ॥ ೨ ॥

ಇವರು ಶಿವಸನ್ನಿಹಿತರಲ್ಲದೆ
ಭವಿಗಳಲ್ಲಿನ್ನೀಶ್ವರಾರ್ಚನೆ
ಯವಸರವನಂಜದೆ ಸಲಿಸಿರೇ ಕುಳ್ಳಿರೆಂದೆನಲು ।
ಎವೆಯನಿಕ್ಕದೆ ನೋಡುತಂ ಭ್ರಮೆ
ಗವಿದೆದೆಗಳುಱೆ ಝಲ್ಲೆನುತ್ತೀ
ಗುವೆನೆನುತ್ತಂ ತನುಗಳಸುಗಳು ಧಿಗಿಲು ಧಿಗಿಲೆನುತ ॥ ೩ ॥

ಬಂದು ಸಿಕ್ಕಿದೆವಿಲ್ಲಿ ನಾವೊಡ
ಬಂದಿಯಲಿ ಮುಗುಳ್ದೋಡಲರಿದಾ
ವಂದದಿಂದಂ ದೇವರುಳ್ಳೊಡೆ ಸಾವು ತಪ್ಪುವುದು ।
ಎಂದು ಕೃತನಿಶ್ಚಯಮನಂಗಳಿ
ನಿಂದವರು ಕುಳ್ಳಿರ್ದು ಭಕ್ತರ
ಮಂದಿಯೊಳಗೊರ್ಬನ ಮುಸುಡನಂತೊರ್ಬನೀಕ್ಷಿಸುತ ॥ ೪ ॥

ಲಿಂಗವಂತರ ಮಾರ್ಗದಿಂ ಹ
ಸ್ತಂಗಳಂ ಸಲೆ ನೀಡಲುಟ್ಟ ಸೆ
ಜಂಗಿನಲಿ ಕಟ್ಟಿರ್ದ ಬದನೆಯ ಕಾಯಿ ನಿಮಿಷದಲಿ ।
ಸಂಗಮೇಶ್ವರ ಬಸವರಾಜನ
ಸಂಗಭಾವದಿ ಬಾಣಲಿಂಗ ಸು
ರಂಗಮಾದುವು ಪರಮ ಭಕ್ತರಿಗಾವ ಗಹನವಿದು ॥ ೫ ॥

ಕಳ್ಳರುಂ ಕರುಣಾಕಟಾಕ್ಷದಿ
ಬೆಳ್ಳರಾಗಿರೆ ನೋಡಿ ಬಸವಂ
ಸಲ್ಲಲಿತ ಕಾಮಿತಫಲಂಗಳನಿತ್ತುವರ್ಗಳನು ।
ನಲ್ಲಭಕ್ತರನೆಂದು ಮಾಡಿದ
ನೆಲ್ಲರುಂ ಕೊಂಡಾಡುತಿರಲಂ
ತಲ್ಲದೆಯು ಮತ್ತೊಂದು ದಿವಸಂ ದಂಡನಾಯಕನು ॥ ೬ ॥

ಸರ್ವಭಕ್ತರು ನುತಿಸುತಿರಲೋ
ರೋರ್ವರಿಗೆ ಕಾಮ್ಯಾರ್ಥತತಿಯನ
ಪೂರ್ವಭಕ್ತಿಯೊಳಿಂತು ಬಸವಂ ಕೊಡುತಿರಲು ನೋಡಿ ।
ಪಾರ್ವತೀಪತಿ ಸಂಗಮೇಶನ
ಲರ್ವ ಮನದೊಳು ಬೇಡಲರ್ತಿಸಿ
ಪೂರ್ವರೂಪಮನುಳಿದು ಜಂಗಮವೇಷಮಂ ತಳೆದು ॥ ೭ ॥

ರಸಿಕತನದೊಳು ಬಂದು ದಿಕ್ಕನೆ
ನೊಸಲಕಣ್ಣಂ ಬೇಡಲೊಡನಂ
ತಸಮಲಿಂಗಪಸಾಯಿತದ ಮೋಹಳಕೆ ಕೈದುಡುಕಿ ।
ಹೊಸತೆ ನಿನಗಿದು ನಿನ್ನ ಮಾಯೆಯು
ಪಸರವಂ ನಾ ಬಲ್ಲೆನೆನುತಾ
ಬಸವನಾಥನ ಮುಖಕೆ ಮುಕುರವನಾಗ ತೋಱುತ್ತ ॥ ೮ ॥

ಮೂಱುಕಣ್ಣವೆ ನಿನಗೆ ಸಹಜಂ
ಚಾಱದೀಶ್ವರ ನೋಡು ನೀನೆನೆ
ತೋಱಿದಾ ಕನ್ನಡಿಯೊಳಗೆ ಭಾಳಾಕ್ಷನುಂ ಕಂಡು ।
ಮೋಱೆಯಂ ಬಾಗಿಸುತ ಬಸವನ
ದೂಱಿಗೊಳಗಾದೆನೆಯೆನುತ ತಲೆ
ದೋಱದತ್ತಲೆ ಸರಿವುತಿರೆ ನೋಡಲಿಲೆ ನಿಲು ನಿಲ್ಲು ॥ ೯ ॥

ಓಡದಿರು ಸಂಗಯ್ಯ ಹೋ ನಿಲು
ಮೋಡದಿರು ನಾ ನಿಮ್ಮನೊಂದಂ
ಬೇಡೆನೆನ್ನಂ ಜೇಡು ಜೇಡಿದಡೀವೆನಡಿಯಿಡದೆ ।
ಬೇಡನಾಗದಿರಿತ್ತಲೆನ್ನಂ
ನೋಡು ನಿಜಭಕ್ತರ ಮನೆಗಳೊಳು
ಜೂಥಿಸಿದ ನೆಱೆಯಂಕಕಾಱನನೆನ್ನ ನೀನಱಿಯು ॥ ೧೦ ॥

ನಿನ್ನ ಕೊರಳಿಗೆ ಕಪ್ಪು ಬಾರದ
ಮುನ್ನವಾ ತ್ರಿಪುರಂಗಳುರಿಯದ
ಮುನ್ನ ಗೌರಿಯ ಮದುವೆಯಾಗದ ಮುನ್ನ ಘೂಗಗನ
ದಿಙ್ನಿಚಯಮುಂ ಜಗಕೆ ರಚಿಸದ
ಮುನ್ನ ಮೂರ್ತಿಗಳೆಂಟುವಿಲ್ಲದ
ಮುನ್ನವಜಹರಿಗಳು ಜನಿಸದತ್ತತ್ತಲಿಂ ಮುನ್ನ ॥ ೧೧ ॥

ಅತ್ತಲಿಂ ಮುನ್ನತ್ತಲಿಂ ಮು
ನ್ನಿತ್ತ ನೀವೆನ್ನಾಳ್ದ ನಾನಾಳ್
ಚಿತ್ತಜಾರಿಯದೇಕೆ ಕಳವಳಿಸಿದಪಿರೆನ್ನೊಡನೆ ।
ಬಿತ್ತರಿಸಿ ನೀ ಹೋಗಬಹುದೆಯೆ
ನುತ್ತ ಶಿವನೊಳು ಗೆಲಿದನಂಕವ
ನುತ್ತಮೋತ್ತಮ ಭಕ್ತಿಯಲಿ ಭಂಡಾರಿ ಬಸವಣ್ಣ ॥ ೧೨ ॥

ದಂಡನಾಥಾಗ್ರೇಸರಂ ಜಗ
ದಂಡಮಂಡಿತ ಸಿತಯಶಂ ಶಶಿ
ಖಂಡಚೂಡಾಖಂಡಿತಾಮಳ ಭಕ್ತಿನಿಶ್ಚಳನು ।
ಚಂಡಬಲನರಿಮದಜಲಜವೇ
ದಂಡನೊಂದುದ್ದಿನಂ ಬಸವನಾ
ಮಂಡಲಾಧಿಪನೋಲಗದೊಳೊಲವಿಂದ ಕುಳ್ಳಿರ್ದ ॥ ೧೩ ॥

ಸೂಸದಂಜದಿರೋಹೊಯೆನುತವಿ
ಕಾಸಮುಖದಿಂದೊರೆದು ಹರವಿಯ
ನಾಸಮಯದಿಂದೆತ್ತುವಂದದಿ ಕೈಗಳಂ ನೀಡೆ ।
ಲೇಸು ಬೊಟ್ಟನನಿತು ಭಸಿತಮಂ
ಪೂಸಿದಾತಂ ಬೆಟ್ಟದಂತುಟ
ದೈಸು ಮರುಳಹನೆಂಬುದದು ಸಲೆಯೆನುತ ಬಿಜ್ಜಳನು ॥ ೧೪ ॥

ನಸುನಗುತ ಬಸವಯ್ಯ ಅಕ್ಕಟ
ಮುಸುಕಿತೇ ಶಿವಮರುಳು ನಿನ್ನುವ
ನಸಮಭಕ್ತಿರಸಂ ನಿನಗೆ ತಲೆಗೇಱತೇ ಭ್ರಮಿಸಿ ।
ಸಸಿನೆ ಇದ್ದಂತಿರ್ದು ತುಂಬಿ
ರ್ದಸಮ ಸಭೆಯೊಳು ಅಂಜದಿರುಯೆನು
ತೊಸೆದು ತೋಳ್ಗಳನೆತ್ತಿ ನೀಡುತ ಹಿಡಿದುದೇನೆನಲು ॥ ೧೫ ॥

ಹೇಳಲಾಗದು ತನ್ನ ಸದ್ಗುಣ
ಜಾಲವಂ ತನತನಗದಂ ತಾಂ
ಹೇಳದಿರ್ದೊಡೆ ಸಭೆ ನಗುವುದೆಂದಾ ಬಸವರಾಜ ।
ಹೇಳಿದನು ಬಿಜ್ಜಳಧರಾಧಿಪ
ಕೇಳು ತತ್‌ತ್ರಿಪುರಾಂತಕನ ದೇ
ವಾಲಯದ ಮೂಡಣಕಡೆಯೊಳಱಿಗಾವುದಱೊಳುಂಟು ॥ ೧೬ ॥

ಭೂವಿನುತ ಕಪಿಲೇಶ್ವರಂ ತ
ದ್ದೇವದೇವಂಗೊರ್ಬ್ಬ ತಾಪಸಿ
ಸಾವಿರಱುನೂರ್‌ ಖಂಡುಗ ಕ್ಷೀರಾಭಿಷೇಕವನು ।
ಓವಿಮಾಡಲು ಬೀದಿಬೀದಿಗೆ
ತೀವಿ ಕಾಲುವೆಗಟ್ಟಿ ಹರಿಯೆ ಗ
ಜಾವಳಿಯ ಪದಘಟ್ಟಣದಿ ಜಾಗೆದ್ದ ಕೆಸಱೊಳಗೆ ॥ ೧೭ ॥

ಹೊತ್ತು ಆಳೆಯಂ ಬೀದಿಯಲಿ ಮಾ
ಱುತ್ತ ಕಾಟಕನೆಂಬುವಳು ನಡೆ
ವುತ್ತ ಕೊಗ್ಗೆಸಱಲ್ಲಿ ಕಾಲ್ಗಳು ಜಾಱಿ ನಡನಡುಗಿ ।
ಇತ್ತಲೀಕ್ಷಿಸಿ ಕೆಡೆವ ಮಡಕೆಯ
ನೆತ್ತು ಬಸವಾಯೆನಲು ಹರವಿಯ
ನತ್ತ ಕಯ್ಯಂ ನೀಡಿ ಬೀಳದ ಮುನ್ನ ನೆಗಹಿದೆನು ॥ ೧೮ ॥

ಎನುತಗೊಲ್ಲತಿಯಾಕೃತಿಯನಾ
ಮನೆಯನಾ ಸತಿಯಿದ್ದ ಠಾವಂ
ತನಗೆ ಬಸವಂ ಹೇಳಿದೊಡೆ ತಾನಾಕೆಯಂ ಒರಿಸಿ ।
ಇನಿತುಮಂ ಬೆಸಗೊಳುತಿರಲ್ಕಾ
ಜನಪತಿಗೆ ಭಂಡಾರಿ ಹೇಳಿದು
ದನಿತುಮಂ ವಂಚಿಸದೆ ವಿವರಿಸಿ ಗೋಪಿ ಹೇಳುತ್ತ ॥ ೧೯ ॥

ಜಾಱಲಂಟಿದ ಕಾಲಱೊಂಪೆಯ
ನೂಱಿ ಬಿದ್ದಂಗಯ್ಯ ಕೆಸಱಂ
ತೋಱುತಂ ಭೂನಾಥ ನೀನಱಿಯಾ ಜಗತ್ರಯಕೆ।
ಬೀಱುವೀತನ ಘನಮಹಿಮೆಯಂ
ಮೀಱಿದುದನೇವೊಗಳ್ವೆನಭವಂ
ಗೇಱಿದುತ್ತಮ ಭಕ್ತಿಯುಳ್ಳ[ವನೆತ್ತಿದನು ಬಸವ] ॥ ೨೦ ॥

ದಂಡನಾಥರ್ವೆರಸಿ ಬಸವಣ
ದಂಡನಾಥಾಗ್ರೇಸರಂ ಭೂ
ಮಂಡಳಾಧಿಪನನುಮತದಿ ಮತ್ತೊಂದು ದಿನದಲ್ಲಿ।
ತಂಡತಂಡದ ಪೆರ್ಬಲಕೆ ಮುಂ
ಕೊಂಡು ಜೀವಿತಮಂ ಕೊಡುವೆಡೆಗೆ
ಮಿಂಡಜಂಗಮವಾಗಳೆಯ್ತಂದುರವಣಿಸಿ ನಿಂದು ॥ ೨೧ ॥

ದಟ್ಟಿಸುತ್ತಿಲೆ ಬಸವ ಕೊಡುಕೊಡು
ಪೆಟ್ಟಿಗೆಯ ಪೊನ್ನೆಲ್ಲವಂ ಹಿ
ನ್ನೆಟ್ಟದೀಗಳೆ ಎಂಬ ಮಾತಿಂಗೊಲಿದು ನಸುನಗುತ।
ಕೊಟ್ಟನಾಗಳೆ ಕೊಡಲೊಡನೆ ಮರ
ವಟ್ಟು ಮಂತ್ರಿಗಳೆಯ್ದೆ ಭೂಪನ
ಕಟ್ಟಿದಿರೊಳಭಿವಂದಿಸುತ್ತಂ ಕೈಗಳಂ ಮುಗಿದು ॥ ೨೨ ॥

ಕಾಳಿಮರ ಸಂಕರಿಯ ಕೇಶವ
ಚೋಳಿಯಣ್ಣಂ ಕುಂದತಮಿಭೂ
ಪಾಳ ಹೆಮ್ಮಡಿಯುಗ್ರಚಂಡಿಯ ಕಸವ ಮಂತ್ರಿಗಳು।
ಮೇಳಿಗರಸನು ಸಹಿತ ತಮ್ಮೊಳು
ಮೇಳವಿಸಿ ಬಿಜ್ಜಳ ಮಹೀಶಗೆ
ಹೇಳಿದರು ದೂಱಿದರು ಬಸವಣ ದಂಡನಾಯಕನ ॥ ೨೩ ॥

ಹೇಳಿದೊಡೆ ಕೊಂಡೆಯವಹುದು ಮೇಣ್
ಹೇಳದೊಡೆ ತಪ್ಪಪ್ಪುದಾಗಿಯೆ
ಹೇಳಲೇವೇಳ್ಕೀಗ ಭಂಡಾರದ ಧನವನೆಂದ್ಬಿ ।
ಕೇಳರಸ ಮಿಂಡರ್ಗೆ ಕೊಟ್ಟನು
ಭಾಳನೇತ್ರನು ಬಸವರಸನೊಡ
ನಾಳತನವೆಮಗಾಗದಂಜುವೆವೆನುತ ಕೊಂಡಿಸಲು ॥ ೨೪ ॥

ಮುಳಿದು ಭರದಿಂ ಬರಿಸಿ ಕಾಣು
ತ್ತಾಳವಿಯಲಿ ಬಸವಣ್ಣನಂ ಬಿ
ಜ್ಜಳನಿದೇನೈ ನಚ್ಚಿದವರೊಡವೆಯನೆ ಪಾಳ್ಗಿಯ್ದಿ ।
ಗಳಿಸಿತಂದೆಮಗರ್ಥವೀವುದ
ನುಳಿದು ಭಂಡಾರವನೆ ಮಿಂಡ
ರ್ಗೆಳಸಿ ಚೆಲ್ಲುವುದುಚಿತವೇಯೆಂದಾಗ್ರಹಿಸಿ ನುಡಿದು ॥ ೨೫ ॥

ತಪ್ಪಿದೇವುದು ನಮ್ಮ ಧನವಂ
ತಪ್ಪಿದೊಪ್ಪಿಸಿ ಹೋಗು ಸಾಕಿ
ನ್ನೊಪ್ಪದಿಂ ಭಂಡಾರದೊಡೆತನವುಂ ಪ್ರಧಾನಿಕೆಯುಂ ।
ತಪ್ಪದೆನ್ನ ಧನಕ್ಕೆ ನೀನೇಂ
ಬೊಪ್ಪವೇನಾಯ್ತು ಕಟ ನಾ
ವಪ್ಪೊಡನ್ಯರಲಾ ವೃಥಾಳಾಪಂಗಳೇಕೆಮಗೆ ॥ ೨೬ ॥

ದಂಡಿಸುವರಾರೆನ್ನನೆಂಬು
ದ್ದಂಡಿಕೆಯೊಳೆಮ್ಮರ್ಥಮಂ ನೀಂ
ಕೊಂಡೆಯಲ್ಲದೆ ಮಿಕ್ಕಿನವರಾರಾದಡೇನವರ ।
ದಂಡಿಸದೆ ಬಿಡುವೆನೆ ಜವನ ಮುಳಿ
ಗೊಂಡಡಂ ಕೇಳೆನಲು ಬಸವಣ
ದಂಡನಾಥಂ ನಸುನಗುತಮಿಂತೆಂದನರಸಂಗೆ ॥ ೨೭ ॥

ಅತಿಶಯದ ಶಿವಭಕ್ತಿಯೆಂಬ
ಪ್ರತಿಮ ಚಿಂತಾಮಣಿಯುಮವರ
ಕ್ಷಿತಿಜಮುಂ ಸುರಧೇನುವುಂ ಕನಕಾಚಲಮುಮಿರಲು ।
ಮತಿಯೊಳೆಂದುಂ ಭಕ್ತನಾದವ
ನಿತರಧನಮಂ ಬಯಸಿದಪನೇ
ಅತಿವಿವೇಕವನುಡುಗಿ ನುಡಿವುದು ನೀತಿಯೇ ಭೂಪ ॥ ೨೮ ॥

ಬಿಡುಬಿಡಾ ಸಂದೇಹಮಂ ನಿ
ನ್ನೊಡವೆಯಲ್ಲದು ನಮ್ಮೊಡೆಯರುಗ
ಳೊಡವೆಯನೆ ಒಡೆಯರ್ಗೆ ಕೊಟ್ಟೆನದಲ್ಲದೇ ನಿನ್ನ ।
ಒಡವೆಯೊಳಗರೆಕಾಣಿಯಂ ಸವೆ
ದೊಡೆ ಬಳಿಕ ನಾಂ ಭಕ್ತನಲ್ಲೈ
ಮುಡುಪಿನೆಣಿಕೆಗೆ ಕುಂದದಂತೆ ವಿಚಾರಿಸೈಯೆನುತ ॥ ೨೯ ॥

ಪೆಟ್ಟಿಗೆಗಳಂ ತೆಗೆತರಿಸಿ ಮುಂ
ದಿಟ್ಟು ಜನಪನ ಸಂಶಯದ ಬೇ
ರೊಟ್ಟವಿಸಿ ಕೀಳ್ವಂತೆ ನಗುತಂ ಕೀಲ್ಗಳಂ ಕಳೆಯೆ ।
ದಿಟ್ಟಿಪರದಿಟ್ಟಿಗಳಿಗಚ್ಚರಿ
ಹುಟ್ಟೆ ಪೊನ್ನುಕ್ಕಿದೊಡೆ ಹರುಷಂ
ಬಟ್ಟೆ ಭೂಪಂ ಬಸವರಸನಂ ಕೀರ್ತಿಸುತಮಿರಲು ॥ ೩೦ ॥

ಬಸವರಾಜನನಾವನುಂ ಕೊಂ
ಡಿಸಿದೊಡಿನ್ನಾ ಚಂಡಿಗುನ್ನಿಯ
ರಸನೆಯಂ ತವೆಕೊಯ್ದು ಸುಣ್ಣವನೊರಸಿ ಮಿಗೆಹುರಿದ ।
ಬಿಸಿಯ ಮಳಲಂ ತರಿಸಿ ಬಾಯ್ದುಂ
ಬಿಸಿದಪೆಂ ನಾನೆನುತ ಬಿಜ್ಜಳ
ನೊಸೆದು ಕಳುಹಲು ದಂಡನಾಥನು ಬಂದನರಮನೆಗೆ ॥ ೩೧ ॥

## ೫. ಜಂಗಮಪ್ರಾಣಿಯುಮೆನಲು ಬಸವಂಗೆ ಸಲುವುದು

ಮತ್ತೆಯೊಂದಿವಸಂ ಬಸವ ಸಚಿ
ವೋತ್ತಮಂ ಸದ್ಭಕ್ತಿಯುನ್ನತಿ
ವೆತ್ತು ಜಂಗಮ ಪರಿಚರಣಪೂಜಾವಸಾನದಲಿ ।
ಚಿತ್ತದೊಳು ರತಿಮೂಡಿ ಸರಸಾ
ಯತ್ತ ಲಿಂಗಾಭ್ಯರ್ಚನಕ್ರಿಯೆ
ವೊತ್ತು ತಚ್ಛಿವಪರವಶಾಲೀಢಾನುಶಕ್ತಿಯಲಿ ॥ ೧ ॥

ಲಿಂಗವಂ ತಾ ನೋಡಿ ನೋಡಿ ಸು
ರಂಗಸುತ್ತಂ ಪರಮ ಶಿವಸುಖ
ಸಂಗಸುಧೆಯಂ ಸವಿಸವಿದು. ತಣಿವಿಲ್ಲದೀಂಟುತ್ತ ।
ಹೊಂಗಿ ಹರನಂ ಮುಟ್ಟಿಮುಟ್ಟಿ ಕ
ರಂಗುತವಿರಳ ಭಕ್ತಿಸುಭಗನು
ಹಿಂಗದವಿರತವೊಂದಿವೊಂದಿಯಲರ್ದು ನಲಿವುತ್ತ ॥ ೨ ॥

ಕವಿಯ ಕಲ್ಲಿಯ ನೇಣುಮಂ ಬಿ
ಟ್ಟವೊಲೊಡರ್ಚುವ ಸಕರಣೇಂದ್ರಿಯ
ನಿವಹವರ್ಕನ ಕೂಡೆ ರಶ್ಮಿಗಳಸ್ತಮಿಸಿದಂತೆ ।
ಶಿವನೊಳಸ್ತಮಿಸಲು ಹೊರಗೆ ನೋ
ಡುವ ನಯನಮುಂ ತನ್ನನೀಕ್ಷಿಸ
ಲವಸರಿಸುವಾ ಚಿತ್ತಮುಂ ಶಿವನಲ್ಲಿ ಸಿಕ್ಕಿರಲು ॥ ೩ ॥

ಅಸಮನಿರತಿಶಯಾನುಭವ ಭ
ವ್ಯಸುಖಮೆಯ್ದೆ ನಿಗುಳ್ದು ನಿಶ್ಚಲ
ವೆಸೆವ ಪರಶಿವಯೋಗನಿದ್ರಾಮುದ್ರಿತದೊಳಿರಲು ।
ಬಸವನಿಹ ಸದ್ಭಾವಮಂ ವೀ
ಕ್ಷಿಸುತ ನಲಿದಾ ಚೆನ್ನಬಸವಣ
ನೊಸೆದು ವಂದಿಸಿ ಕೀರ್ತಿಸುತ್ತಂ ತನ್ನೊಳಿಂತೆಂದ ॥ ೪ ॥

ಮುದ್ರಿಸಿದ ಶಿವಯೋಗನಿದ್ರಾ
ಭದ್ರ ಸೌಖ್ಯಸಮುಪ್ರಸೆನಿಪ ಸು
ಚಿದ್ರಮಣನೆನ್ನಯ ಮಹದ್ಗುರುಗಲ್ಲದೆಯು ಮತ್ತೆ ।
ನಿದ್ರೆ ತಿಳಿಯದೆ ತೊಳಲುವತಿ ಜಡ
ನಿದ್ರೆ ಮುಸುಕಿದವರ್ಗೆ ಸತತಂ
ನಿದ್ರೆಯಲ್ಲದೆ ಯೋಗನಿದ್ರೆಯದೆಂತು ದೊರಕುವುದು ॥ ೫ ॥

ಅತುಳಿತಾಮಳ ಯೋಗನಿದ್ರೋ
ದಿತ ಸಮಯದಲಿ ಸದ್ಗುರುವಿನಿರ
ವತಿಶಯವು ನೋಡಲ್ಕೆ ತೆರೆಯಿಲ್ಲದ ಶರಧಿಯಂತೆ ।
ಮಿತಚಲನವಿಲ್ಲದೆ ಮಜಿೀವ ಮಾ
ರುತನವೊಲು ನಿರ್ಮೇಘವಾಗಿಹ
ವಿತತ ನಭದವೊಲಿಂದ್ರಿಯಂಗಳ ಗಜಬಜೆಯನುಡುಗಿ ॥ ೬ ॥

ಸನ್ನುತಾನಂದೈಕ್ಯಸೌಖ್ಯಾ
ಭಿನ್ನಭಾವದೊಳನವರತಮುಂ
ತನ್ನ ತಾ ಮಜಿೀದಿರ್ದಹನೊ ಶಿವಲೀಲೆಯಲಿ ಮತ್ತೆ ।
ತನ್ನ ಕರತಳವೊತ್ತುವುದೊ ಸಂ
ಪನ್ನ ಶಿವನನೆನುತ್ತ ಮದ್ಗುರು
ತನ್ನ ಹೃತ್ಪದ್ಮಾಸನಸುಖಾಸೀನನಂ ಮಾಡಿ ॥ ೭ ॥

ಎಂದು ತದ್ಗುರುಲಿಂಗವಂ ಪಲ
ಸಂದದಿಂದಾ ಚೆನ್ನಬಸವನು
ವಂದಿಸುತ್ತಂ ಕೀರ್ತಿಸುತ್ತಿರಲಾ ಸಮಯದಲ್ಲಿ ।
ಮುಂದೆ ಸಂದರುಶನಿಮಿತ್ತದೊ
ಳಂದು ಪೊಸಜಂಗಮವು ತಾವೆಯಿ
ತಂದು ಘನಶಿವಯೋಗನಿದ್ರಾಪರವಶದೊಳಿರ್ದ ॥ ೮ ॥

ಬಸವನಿರವಂ ದ್ವಾರಪಾಲರ
ದೆಸೆಯೊಳಱಿದು ಮರಳ್ದು ತಾಂ ಗಮ
ನಿಸಲೊಡನೆ ಬಸವಣ್ಣ ಜಂಗಮ ಜೀವ ತಾನಾಗಿ ।
ಬಸವರಾಜನ ಜೀವಮುಂ ಭರ
ವಸದೊಳಾ ಲಿಂಗೈಕ್ಯನೊಡನಂ
ತೊಸೆದು ಪೋಗಲು ಹೆದರುತಂ ಪರಿಚರರು ಸಂದಣಿಸಿ ॥ ೯ ॥

ಈ ಹದನನಱಿದಾ ಕಟಕದೊಳು
ಬೇಹ ಜಂಗಮಲಿಂಗವಂತ ಸ
ಮೂಹವೆಯಿತಂದೆಯ್ದೆ ಸಂಧ್ಯಾವಸರ ಸಮಯವಲಿ ।
ಮೋಹಿ ಶಿವಲಿಂಗಾರ್ಚನಾತಿ
ಸ್ನೇಹದೊಳು ಕುಳ್ಳಿರ್ದ ಲಿಂಗ
ಗ್ರಾಹಕಂ ಬಸವಣ್ಣನಿಹ ಸದ್ಭಾವಮಂ ನೋಡಿ ॥ ೧೦ ॥

ಹುತವಹಾಂಬಕಭಕ್ತರತ್ಯ
ದ್ಭುತಮನೊಂದಿ ಇದಾವುದೊ ಪ್ರ
ಸ್ತುತವಿದಾವ ನಿಮಿತ್ತವೊ ನೆಪವಾವುದೋ ಇವಱ ।
ಸ್ಥಿತಿಯನಱಿಯಲುವೇಳ್ಕು ಕರೆಯಿರೆ
ಹಿತವರಂ ಕರಣಿಕನಿಯೋಗ
ಪ್ರತತಿಯುಂ ಪರಿಚಾರಕರನಾ ದ್ವಾರಪಾಲಕರ ॥ ೧೧ ॥

ಇಂದಿನೀಶಾರ್ಚನೆಯುಚಿತವೇ
ನೆಂದು ತಿಳಿಯಿರೆ ಗೀತದವಸರ
ವಿಂದಜಾಯಿರೇ ವಚನಭಂಡಾರದ ಕವಳಿಗೆಗಳ ।
ತಂದು ನೋಡಿರೆ ಭಾಷೆಗಳನೇ
ನೆಂದು ನುಡಿದನು ತದ್ವ್ರತಂಗಳ
ನಿಂದು ಹಿಡಿದ ಕ್ರಮವದಾವುದಿದಂ ವಿಚಾರಿಸಿರೆ ॥ ೧೨ ॥

ಆರು ಬಂದರು ಮುನ್ನಲಿತ್ತಲ
ದಾರು ಹೋದವರಿದ್ದವರು ತಾ
ವಾರು ಹೇಳಿರೆ ಬಲ್ಲಿರಾದಡೆ ಕಾರ್ಯವಿದನೆನಲು ।
ಸಾರಮತಿಯಾ ಚೆನ್ನಬಸವಕು
ಮಾರನೆಯ್ತಂದವರ್ಗೆ ವಂದಿಸಿ
ಸೇರಿ ಮುಕುಳಿತಹಸ್ತನಾಗಿಂತೆಂದನೊಲವಿಂದ ॥ ೧೩ ॥

ಅವಸರದವೇಳೆಯೊಳತಿ ಸುಖೋ
ತ್ಸವವಲರಿ ಶಿವಯೋಗನಿದ್ರೆಯೊ
ಳವಿರತಂ ಸಿಕ್ಕಿರಲು ಸುದ್ಗುರುಜಂಗಮವು ಬಂದು ।
ಅವಿರಳಧ್ಯಾನೈಕಭಾವಂ
ಕವಿದಿರಲ್ಕಾ ಬಾಗಿಲವರಿಂ
ದವೆ ಶಿವೈಕ್ಯನು ಕೇಳುತಾಗಳೆ ಇತ್ತ ಬರುತಿರ್ದ ॥ ೧೪ ॥

ತಿರುಗಿ ಜಂಗಮವತ್ತ ಹೋದನು
ಮರಳಿ ಕಾಣೆವು ನಾವವರನೀ
ಪರಿಯು ನೆವವಂತಾಗಲಾಪುದಲಾ ಅದೆಂತೆನಲು ।
ಅರಿದರಿದು ಜಗಕೆನಲು ಈ ನಿ
ಬ್ಬರದ ಭಾಷೆಯ ಗೀತವೊಂದಂ
ಗುರುವರೇಣ್ಯಂ ಬೆಸಸಿದನು ತಾನೀಗಳಿಕೆ ಮುನ್ನ ॥ ೧೫ ॥

ಕ್ಷೋಣಿಯೊಳು ಭಕ್ತಾಳಿಗೆಲ್ಲಂ
ಪ್ರಾಣಲಿಂಗಂ ಸದ್ಗುರುದಯಾ
ತ್ರಾಣಲಿಂಗಂ ಪ್ರಾಣಲಿಂಗಂ ತದ್ಗುರುಸ್ವಾಮಿ ।
ಪ್ರಾಣವಾ ಗುರು ತಾನೆನಿಪ್ಪ ಧು
ರೀಣ ಜಂಗಮಲಿಂಗವೇ ಮತ್
ಪ್ರಾಣಲಿಂಗವಿದಕ್ಕೆ ಸಂಗಮದೇವನೇ ಸಾಕ್ಷಿ ॥ ೧೬ ॥

ನೋಟ ಶೀಲವ್ರತಶಿವೈಕ್ಯರ
ಪಾಟಿಯೆಸೆವುಪ್ಪರ ಗುಡಿಗಳಂ
ಮಾಟಕೂಟದ ಮಹಮನೆಗಳೆನಿಸಿದವು ಕೋಟಾನು ।
ಕೋಟಿಭಕ್ತರ ಮನೆಗಳಲಿ ಪರಿ
ಪಾಟಿಯಿಂದಱಸುತ್ತ ಗಂಗಾ
ಜೂಟನಗ್ಗದ ಜಂಗಮಾಂಘ್ರಿಗೆ ನಮಿಸಿ ನಿಮಿಷದಲಿ ॥ ೧೭ ॥

ಹೋಗಿ ನೀವೊಡಗೊಂಡುಬಹುದೆನ
ಲಾಗಳಂತೆ ಹಸಾದವೆನುತನು
ರಾಗದಿಂ ಪರಿಹಾರರಾ ಗಣತಿಂಥಿಣಿಗೆ ನಮಿಸಿ ।
ಹೋಗಿ ತಾವಲ್ಲಲ್ಲಿ ಯಱಸುತ
ಹೋಗಿ ಕಂಡೊಡಗೊಂಡು ಬರುತಿರ
ಲಾಗಿ ಜಂಗಮದೊಡನೆ ತನ್ನ ಪ್ರಾಣವೊತ್ತರಿಸಿ ॥ ೧೮ ॥

ಬಸವರಾಜನು ಜಂಗಮಪ್ರಾ
ಣಸಹನಾಗಿ ವಿವರ್ಧಿಸುತ್ತಾ
ಬಸವನಸು ಉರವಣಿಸಿ ಬಂದಿತು ಕಿನ್ನರಯ್ಯಗಳ ।
ಅಸುವೊದಗಿ ಮೆಯ್ದುಂಬಿ ಬರೆ ತ
ನ್ನಸುವೊಡನೆ ಬಂದಂದವೆಂತೆನೆ
ಬಸವನಾ ಬೊಮ್ಮಯ್ಯನೊಳಗತಿ ಪ್ರಾಣವಾಗಿರಲು ॥ ೧೯ ॥

ಇದನಱಿಯಬೇಕೆಂದು ಬಸವನ
ಹೃದಯದಗ್ಗದ ಗುಣ್ಪನೆನುತಂ
ಮದನರಿಪು ತನ್ನೊಳಗೆ ಕಿನ್ನರನಸುವನಡಗಿಸಲು।
ಹೆದಱಿ ದಂಡಾಧೀಶ್ವರಂ ಮನ
ಗದಡಿ ಬೊಮ್ಮಯ್ಯಗಳನೀಕ್ಷಿಸಿ
ಹದುಳಿಸದೆ ನಿಬ್ಬರದ ಶೋಕಾಕ್ರಾಂತನಾಗುತ್ತ ॥ ೨೦ ॥

ಕಿನ್ನರೇಶ್ವರ ಬೊಮ್ಮಿದೇವಾ
ಎನ್ನ ಜೀವಾ ಎನ್ನ ಭಾವಾ
ಎನ್ನ ಲಿಂಗವೆ ಎನ್ನಗುರುವೇ ಎನ್ನ ಸುರತರುವೇ।
ಎನ್ನ ಪರುಷದ ಕಣಿಯೆ ಗುಣಿಯೇ
ಎನ್ನ ಚಿಂತಾಮಣಿಯೆ ಮೇರುವೆ
ಎನ್ನ ಸಜ್ಜನಮಿತ್ರನೇ ನೀನಿಂದು ಬಯಲಾದೈ ॥ ೨೧ ॥

ಎಂದು ಬಸವಯ್ಯಂ ಪ್ರಳಾಪಿಸು
ತೊಂದನೊಂದು ಕಿನ್ನರನ ಗುಣ
ವೃಂದಮಂ ನೆನೆನೆನೆದು ಲೋಚನವಾರಿಯಲಿ ನನೆದು।
ನೊಂದು ಮನದಲಿ ಶೋಕಪಾವಕ
ನಿಂದೆ ತನು ಬೆದಬೆದನೆ ಬೇವುತ
ಮಂದದುಃಖದೊಳಳಲುತೀ ಪರಿಯಲಿ ಬಸವನಿರಲು ॥ ೨೨ ॥

ಆ ಸಮಯದಲಿ ಮನದೊಳಳಿದು
ಲ್ಲಾಸದಿಂ ಪಡಿಹಾರಿ ಬಾಚಯ
ನಾ ಸದಾಶಿವನಸಮ ಗಜವಹ ಮಾಚಿದೇವಗಳ।
ವಾಸಕಾಗಳೆ ಹೋಗಿ ಆ ಗಣ
ದಾಸಿಯಾ ಕಿನ್ನರನ ವಾರ್ತೆಯ
ನಾ ಸಕಳ ಭಕ್ತರ ನಿರೂಪದಿ ಬಿನ್ನವಿಸೆ ಕೇಳ್ದು ॥ ೨೩ ॥

ಒಡೆಯರಲ್ಲಿಗೆ ಬಂದರಾರವ
ರೊಡನೆ ಬಸವಣನೇನಮಾಡಿಹ
ನಡೆಸಿದಾ ಪ್ರಸ್ತುತವದೇನುಂಟೆಱುಹು ನೀನೆನಲು ।
ಹೊಡವಡುತ ಪಡಿಹಾರಿ ಚಿತ್ರೈ
ಸೊಡೆಯ ಮಾದರಸಯ್ಯನೊಳಗಾ
ದೊಡೆಯರಿದ್ದಹರೆಲ್ಲರುಂ ಪೇರೋಲಗಂಗೊಟ್ಟು ॥ ೨೪ ॥

ಬಸವರಾಜನು ಕಿನ್ನರಯ್ಯನ
ನೊಸಗೆ ಮಿಗೆ ತಕ್ಕೈಸಿಕೊಂಡು
ಬ್ಬಸದ ಶೋಕಾಕ್ರಾಂತನಾಗಿದ್ದಹನು ತಾನೆನಲು ।
ಹಸಿತಮುಖನಾಗುತ್ತಯೇನೇ
ನಸಮಭಕ್ತರು ಬಂದರಲ್ಲಿಗೆ
ಬಸವನೇ ಕಿನ್ನರನನಪ್ಪಿಯೆ ಅಳುತಮಿರ್ದಹನೊ ॥ ೨೫ ॥

ಹಿಡಿದ ಭಾಷೆಗಳಱಿಯದಸುವಂ
ಹಿಡಿದೆ ಹೆಂಗಿದ್ದಹನೊ ಮತಿಯುವ
ಗಡಿಸಿ ತಾನೊಂದೊಂದು ಸೂೞ್ ಬಸವಂಗೆ ಭಕ್ತಿಮದ ।
ಅಡರಿ ತಲೆಗೇಱುವುದದೇಱಲು
ನುಡಿವನತಿ ದುರ್ಘಟದ ಭಾಷೆಯ
ನೊಡನೆ ತದ್ಭಾಷೆಯ ಕೊಱತೆ ನೆಱೆಯಿಸುವನೀಗಳ್ಕೆ ॥ ೨೬ ॥

ಬಾಷೆಗಳು ಗೀಷೆಗಳಿವೆಲ್ಲಂ
ಘಾಸಿಯಾಗಲು ಗಾಱುನುಡಿವುತ
ಮೋಸವಾಗಿದ್ದಹನಲಾ ನೆಱೆ ಭಕ್ತಿ ಮರುಳಾಗಿ ।
ಲೇಸುಲೇಸಿದು ಜಂಗಮಪ್ರಾ
ಣಾಂಶವದು ಬಿಡದೀ ಪ್ರಕಾರದೊ
ಳಾಸಱದೆ ತಾಂ ಮುಂಡ ಮೋಚಿವ ಹಾಂಗೆ ಅಱಚುವರೆ ॥ ೨೭ ॥

ಅಕ್ಕಟಾ ಮೆಚ್ಚುವನೆ ಇಂತಹ
ಠಕ್ಕರಿಗೆ ಕಲಿನಾಥನಿದನೆಂ
ತಕ್ಕೆ ಕೇಳ್ದಿವೆ ಭಕ್ತಿಹೀನತೆಯಾದ ವಾರ್ತೆಯನು ।
ಅಕ್ಕು ಕಿನ್ನರ ಬೊಮ್ಮಯ್ಯಂ ಪ್ರಭೆ
ಮಿಕ್ಕ ಭಕ್ತನು ಶಂಭುವಾತನ
ನಕ್ಕಱಿಂ ತನ್ನೊಳು ಬೆರಸಿಕೊಂಡಿರ್ದೊಡೇನಾಯ್ತು ॥ ೨೮ ॥

ಹಾಡಲಱಿಯೆವು ಶೋಕಿಸುತ ಕೊಂ
ಡಾಡಲಱಿಯೆವು ಬಣ್ಣಿಸುತ ಕೈ
ಗೂಡಿ ಕೈವಿಡಿಗೊಡಲಱಿಯೆವಾವಲ್ಲಿಗೈತಂದು ।
ಮಾಡುವಂತಹ ಕೆಲಸವೇನದ
ಕೋಡದಿಹ ಬಸವಣ್ಣನೇ ಸಾ
ಕಾಡಿ ತೋಜಲದೇತಕೀಗಳು ಹೋಗು ನೀನೆನಲು ॥ ೨೯ ॥

ಬೇಗದಲಿ ಪಡಿಹಾರಿ ಪರಿತಂ
ದಾ ಗಣಾವಳಿಗೆಱಗಿ ನಡುಗುತ
ಕೈಗಳಂ ಮುಗಿದಂಜುತಂ ಮಾಚಯ್ಯನೊರೆದುದನು ।
ಆಗ ಹೇಳಲು ಕೇಳ್ದು ಬೆಬ್ಬೆಱ
ಗಾಗಿ ಬಸವಂ ಶೋಕವೆಲ್ಲವ
ನೀಗಿ ನೆಟ್ಟನೆ ತನ್ನ ಭಾಷೆಯ ಮರ್ಮವಂ ಮುಟ್ಟೆ ॥ ೩೦ ॥

ಪ್ರಾಣವಾ ಕಿನ್ನರವರನ ತತ್
ಪ್ರಾಣದೊಳ್ ಸಂಬಂಧವಾಯಿತು
ಪ್ರಾಣಬಂಧದ ಭಾಷೆಗಳನಱುಪಲ್ಕೆ ಬಸವಣ್ಣ ।
ಪ್ರಾಣದಲಿ ತಾನೇಕೆ ಇಪ್ಪನು
ಪ್ರಾಣವಲ್ಲಾ ಜಂಗಮಕೆ ಸತ್
ಪ್ರಾಣವಲ್ಲಾ ಭಕ್ತಲಿಂಗಪ್ರಾಣಿ ಭಂಡಾರಿ ॥ ೩೧ ॥

ಒಂದುವಂ ನೆನೆಯಲ್ಕೆ ತಾ ಜೇ
ಜಿಸೊಂದು ಘಟಿಯಿಸಿತಕಟಿಂಯೇ
ನೆಂದು ಹೇಳಲುಬಹುದು ನಿರ್ವಂಚಕದ ಭಕ್ತಿಯನು ।
ಎಂದುವಗಲದ ಮರ್ಮಕರ್ಮವ
ನಿಂದು ಮಾಚಯನಾಡಬಲ್ಲನು
ಸಂದ ಬಸವನೆ ಬಲ್ಲನೀ ಎರಡನು ಶಿವನೆ ಬಲ್ಲ ॥ ೩೨ ॥

ಆವೆಡೆಯೊಳೀ ಪರಿಯನೆಂದುಮು
ನಾವಜಿುಯೆವೆಂದೆನುತ ಭಕ್ತರು
ತಾವು ಸರ್ಬರು ಸಂದಣಿಸಿ ನೋಡಲ್ಕೆ ಕೇಳಲ್ಕೆ ।
ಭಾವಿಸಲ್ಕೆ ವಿಚಿತ್ರವೆನುತ ಗ
ಣಾವಳಿಯು ಪಡಿಹಾರಿಯುಂ ಮು
ತ್ತಾವಿಗಡೆ ಮಾಚಯ್ಯನಲ್ಲಿಗೆ ಕಳುಹಿದೊಡೆ ಹೋಗಿ ॥ ೩೩ ॥

ನೊಸಲೊರಸಲವರಡಿಗಳಿಗೆ ವಂ
ದಿಸುತ ಬಸವನ ವಾರ್ತೆಯಂ ವಂ
ಚಿಸದೆ ಬಿನ್ನೈಸಲ್ಕೆ ಕೇಳುತ ಹರುಷನಾಗುತ್ತ ।
ಬಸವ ಜಂಗಮಜೀವ ಭಾಪುರೆ
ಬಸವ ಜಂಗಮಭಾವ ಭಾಪುರೆ
ಬಸವ ಜಂಗಮನಿತ್ಯ ಸತ್ಪ್ರಾಣೈಕ ಮಝು ಭಾಪು ॥ ೩೪ ॥

ಜಂಗಮಪ್ರಾಣಿಯುಮೆನಲು ಬಸ
ವಂಗೆ ಸಲ್ಲುವುದು ಸಲುವುದಖಿಳ ಜ
ಗಂಗಳೊಳು ಸಲುವುದು ನಿರುಪಮಂ ನಿರುಪಮಾನವಿದು ।
ಸಾಂಗವಾಗಲು ಹೇಳಲೊಪ್ಪುಗು
ಹಿಂಗದಾಗಲು ಕೇಳಲೊಪ್ಪುಗು
ಮಂಗಳಾದ್ಭುತ ಭಕ್ತಿಯುಕ್ತನೆನುತ್ತ ನಿಮಿಷದಲಿ ॥ ೩೫ ।

ಬರುತಿರಲು ಗಣಕೋಟಿ ಮಡಿವಳ
ಶರಣಂ ಕಂಡುಬ್ಬುತೊಬ್ಬೊ
ಬ್ಬರ ನಮಸ್ಕಾರಾಭಿಗಮನಾಲಿಂಗನಂಗಳಲಿ ।
ಸರಸವೆಸೆಯಲು ತಾನುಮವರುಂ
ಹರುಷವೊಂದಿ ತದೀಯ ಮಾಹೇ
ಶ್ವರ ವಿತಾನಾಜ್ಞಾಪನದೊಳಾ ಮಾಚಿದೇವಯ್ಯ ॥ ೩೬ ॥

ಮತ್ತೆಯುಂ ವೈಯಿಕ್ಕಿ ಭಕ್ತರ
ವೊತ್ತಕಭಿವಂದಿಸಿ ಮಹಾ ಪ್ರಮ
ಥೋತ್ತಮ ಪುರಾತನ ಗಣಾಂಘ್ರಿಗಳಂ ಹೃದಯದಲ್ಲಿ ।
ಹೊತ್ತು ಮಾಚಯ್ಯಂ ಸಮುದ್ಧತ
ವೃತ್ತಿಯಲಿ ನಡೆತಂದು ಸಾರ್ದೊಲ
ವೆತ್ತಿ ಕಿನ್ನರದೇವ ಸಾಕ್ಷಾತ್ ಶ್ರೀಮಹಾದೇವ ॥ ೩೭ ॥

ಪ್ರಾಣಮಿತ್ರನೆನಿಪ್ಪ ಭಕ್ತ
ತ್ರಾಣನಂ ಬಸವಣ್ಣನನಗಲ್ದಿಂ
ತೇಣಧರಧರನಲ್ಲಿಗೆಂತುಜ಼ ಹೋಗಬಹುದಯ್ಯ ।
ಮಾಣದೀಶ್ವರನಾಜ್ಞೆಗಳನೀ
ಕ್ಷೋಣಿಯೊಳು ಪರಿಪೂರ್ತಿಯಾಗಲು
ಕಾಣಿಸದೆ ನಿಮ್ಮೊಳು ಬಸವನಸುವೊಂದಿಸಲು ಬಹುದೇ ॥ ೩೮ ॥

ಬಸವನೊಳಡಗುವುದು ಭಕ್ತಿಯ
ಹೆಸರು ಹೋಹುದಿದಜ ನಿಮಿತ್ತದೊ
ಳೊಸೆದು ನಿಮ್ಮಿಚ್ಛೆಯಲಿ ಹೋಗಲು ಸಲ್ಲದಂತಾಗಿ ।
ಬಸವರಸನುಳ್ಳನಿತು ಕಾಲಂ
ಬಸವರಾಜನ ಕೂಡೆ ನೀವುಂ
ವಸುಧೆಯೊಳಗಿರಲುಚಿತವೇಳೇಳೆಂಬ ಸಮಯದಲಿ ॥ ೩೯ ॥

ತನುವೊಲೆದೊಲೆದು ಕಿನ್ನರಯ್ಯಂ
ಕನಸುಮಂ ಕಂಡುಪ್ಪವಡಿಸಿದ
ನೆನಲು ತತ್ಕ್ಷಣದಿಂದವೇಳ್ಬೆಚ್ಚರಿಯೊದಗುತಿರಲು ।
ಘನಮಹಿಮನಹ ಮಾಚಿದೇವ
ಯ್ಯನ ಚರಣಯುಗಳಕ್ಕೆಱಗಿ ಧಿ
ಕ್ಕನೆ ಬಸವನೆಯ್ತಂದು ತಾಸಾ ಶರಣನಡಿಗೆಱಗಿ ॥ ೬೦ ॥

ತಾವು ಮೂವಱು ಸಕಲ ಭಕ್ತಗ
ಣಾವಳಿಗೆ ಸೈಗೆಡೆಯಲದ್ಭುತ
ಭಾವದಿಂ ಮಾಹೇಶ್ವರರು ಮಾಚಯ್ಯನಂ ನೋಡಿ ।
ಓವಿ ರಕ್ಷಿಸುವೆಡೆಗೆ ಕೋಪಂ
ತೀವಿ ಶಿಕ್ಷಿಸುವೆಡಗೆ ಅರಸನು
ನೀವೆಯಲ್ಲಾಯೆನುತ ಮುದಿತಾಂತಃಕರಣರಾಗಿ ॥ ೬೧ ॥

ರೂಢಿಸಲು ನಿಜಕೀರ್ತಿಯಂ ಕೊಂ
ಡಾಡಿಸಲು ಭೂಪ್ರಜೆಗಳಿಂ ನೆಱೆ
ಪೀಡಿಸಲು ಪರವಾದಿಗಳನವನೀಶ ಬಿಜ್ಜಳನ ।
ಓಡಿಸಲು ಬ್ರಹ್ಮಾಂಡವಂ ಸೆಂ
ಡಾಡಿಸಲು ಶಿಷ್ಟರುಗಳಂ ಕೃಪೆ
ಮಾಡಿ ಸಲಹಲು ದುಷ್ಟರುಗಳಂ ಕಾಡಿ ಭಂಜಿಸಲು ॥ ೬೨ ॥

ಈ ಮಣಿಹವಾಗಿಳೆಗೆ ಬಂದ ಮ
ಹಾಮಹಿಮ ಹರಮೂರ್ತಿ ಜಗದು
ದ್ಧಾಮ ವಿಶ್ರುತಕೀರ್ತಿ ತೇಜಸ್ಸ್ಫೂರ್ತಿ ಮಾಚಯ್ಯ ।
ಪ್ರೇಮವೆಸೆಯಲು ಬಸವನಂ ಸ
ನ್ನಾಮಿ ಕಿನ್ನರ ಶರಣನಂ ಸು
ಕ್ಷೇಮದಿಂ ಜೀವಂತರಂ ಮಾಡಿದನು ನುತಿವೆತ್ತು ॥ ೬೩ ॥

ಪ್ರಾಕಟಂ ಮಿಗೆ ಜಂಗಮ ಪ್ರಾ
ಣೈಕತನುವೆನಲೊಪ್ಪಿ ಭಕ್ತಿ
ಶ್ಲೋಕನೆಂದೆಣ್ಡೆಸೆಗಳೊಳು ವೆಗ್ಗಳಿಸಿ ಪಸರಿಸಲು ।
ಆ ಕಟಕದೊಳು ಬಸವರಾಜನ
ನೇಕ ಲೋಕಂ ಪೊಗಳೆ ಭಕ್ತಾ
ನೀಕಸಹಿತಂ ಮುನ್ನಿನಂತೆ ಸುಖಸ್ಥಿತಿಯೊಳಿರಲು ॥ ೪೪ ॥

ತ್ರಿವಿಧಭಕ್ತಿನಿಯುಕ್ತ ರಾಜ್ಯೋ
ತ್ಸವದೊಳಾ ಬಸವಣ್ಣನಿರಲೊಂ
ದೆವಸವಾತನ ಜಂಗಮಪ್ರಾಣವಜಿಯುಲೆಂದು ।
ಶಿವನು ಮೇದರ ಕೇತಿದೇವನ
ನವಗಡಿಸಿ ತನ್ನೊಳು ಬೆರಸಿಕೊಂ
ಡವಸರದೊಳಾ ಕಟಕದೊಳಗಣ ಭಕ್ತರಾಯೆಡೆಗೆ ॥ ೪೫ ॥

ಬಸವರಾಜನುಸಹಿತವೆಯಿತಂ
ದಸಮ ಜಂಗಮದೋಲಗಂಗೊ
ಟ್ಟಿಸೆವುತಿರಲಾ ಸಮಯದಲಿ ಕೇಳಿಕೆಗಳನುಗೊಳಿಸಿ ।
ಹೊಸಪರಿಯ ರೀತಿಗಳ ಗೀತ ಸ
ರಸದ ತತವಿತತಾದಿ ವಾದ್ಯ
ಪ್ರಸರಮೇಳನದಲಿ ಸೊಗಸಲಾಡುತ್ತ ಕೇಳಿಸಲು ॥ ೪೬ ॥

ಹಿರಿಯರೆಲ್ಲರು ಬಂದು ಕುಳ್ಳಿತು
ನೆರೆದು ಮಾಚಯ್ಯಗಳನಿಲ್ಲಿಗೆ
ಕರೆಂಪಿನಲ್ಕೆ ಹಸಾದಮೆನುತಂ ಬಾಚ ಪಡಿಹಾರಿ ।
ಸರಸರನೆ ತಾನೆಯ್ದಿ ಮಡಿವಳ
ಶರಣನಂ ಕಾಣುತ್ತ ವಂದಿಸಿ
ಕರಯುಗಂ ಮುಗಿದಿದಿರ್ದವಂಗಾ ಅಪ್ಪುಸಿಂತೆಂದ ॥ ೪೭ ॥

ಉಸುರುಸುರು ನೀನೀಗ ಬಂದ ಕೆ
ಲಸವದಾವುದೆನುತ್ತಿರಲು ವಂ
ದಿಸಿ ಮುಗಿದ ಕೈವೆರಸಿ ಬಿನ್ನೈಸಿದನು ಪಡಿಹಾರಿ ।
ಅಸಮನೇತ್ರನು ಕೇತಿದೇವನ
ನೊಸೆದು ತನ್ನೊಳಿ ಕೂಡಿಕೊಂಡಡೆ
ಬೆಸಸಿ ಕಳುಹಿದರೆನ್ನನಿಲ್ಲಿಗೆ ಶಿವಗಣಶ್ರೇಣಿ ॥ ೪೮ ॥

ನೀವು ಬಿಜಯಂಗೈದು ಭಕ್ತಗ
ಣಾವಳಿಯೊಳಿರವೇಳ್ಕು ಸಜ್ಜನ
ಜೀವ ಚಿತ್ತೈಸೆನಲು ಮಡಿವಳ ಮಾಚಿದೇವಯ್ಯ ।
ದೇವನೊಳಕೊಂಡಿರ್ದ ಭಕ್ತನ
ನೋವಿ ಒಸಗೆಯನೀಯಲೆಂದಾ
ವಾವ ಹಿರಿಯರು ಬಂದರಲ್ಲಿಗೆ ಹೇಳು ನೀನೆನಲು ॥ ೪೯ ॥

ಸಕಳ ಮಾಹೇಶ್ವರರು ಜಂಗಮ
ನಿಕರಸಹಿತಂ ಬಸವರಾಜನು
ಪ್ರಕಟದಿಂ ಬಂದಿದ್ದಹರು ಕೇತಯ್ಯಗಳ ಮುಂದೆ ।
ಟಕ ವಿಕಟ ಧಿಕ್ಕಟ ಧಿಕಟಧಿಂ
ಮಿಕಟವೆಂಬಾ ರವವೆಸೆವ ಕೇ
ಳಿಕೆಯನಾಡಿಸುತಿದ್ದಹರು ತಾವೆನಲು ಮಾಚಯ್ಯ ॥ ೫೦ ॥

ಗಹಗಹಿಸುತಂ ಬಸವನುಂ ತಾ
ನೆಹಗೆ ಬಂದಿದ್ದಹನೊ ನಾಚಿಕೆ
ಯಹುದಲಾ ತನಗೆಂದಱಿಯನೇ ಮಱೆದನೇ ತನ್ನ ।
ಗಹನ ಭಾಷೆಯನಿಂದಕಟ ಬಂ
ದಿಹ ಮಹಂತರು ಮೌನಗೊಂಡಿ
ದ್ದಹರದೇತಕ್ಕಲ್ಲಿ ವಿಕಳತೆಯಾದನವ ಕೂಡೆ ॥ ೫೧ ॥

ಭೂತನಾಥನು ಕೂರ್ತು ಮೇದರ
ಕೇತಿದೇವನನೊಯ್ದೊಡಂ ತಾ
ನಾತನೊಡನೊಂದಾಗಿ ಹೋಗದದೇತಕಿದ್ದಹನು ।
ಮಾತು ಪಲ್ಲಟವಾಯ್ತು ತನಗಿ
ನ್ನೇತಱದು ತಜ್ಜಂಗಮಪ್ರಾ
ಣಾಂತಿಕೈಕಪ್ರಾಣಿಯೆಂಬುದು ವೈಶಿಕವೊ ನಿಜವೊ ॥ ೫೨ ॥

ಹೋಗು ಹೋಗೈ ನೀನೆಮಗೆ ಬರ
ಲಾಗದಲ್ಲಿಗೆ ಬಸವನಿದ್ದಹ
ನಾಗಿ ಬಾರೆವು ಹೋಗೆನಲು ಪಡಿಹಾರಿ ಅಲ್ಲಿರ್ದು ।
ಆಗ ನಡನಡನಡುಗುತಂ ಕಡು
ವೇಗದಿಂ ಪರಿತಂದು ಭಕ್ತ ಮ
ಹಾಗಣಕೂಟಕ್ಕೆ ಬಿನ್ನೈಸಿದನು ಪಡಿಹಾರಿ ॥ ೫೩ ॥

ತಾಮಸಂ ಮಾಡಿದನು ಬಸವನು
ಶ್ರೀಮಹಾದೇವಾ ಇದೇತಱ
ನೇಮವೇತಱ ಸೀಮೆ ಏತಱ ಜಂಗಮಪ್ರಾಣಿ ।
ಆ ಮಹಾಂತರು ಸುಮ್ಮನಿರ್ದಹ
ರಾ ಮದಾಂಧನ ಕೂಡೆಯವರಿಗೆ
ಕ್ಷೇಮವಾಗಲಿ ಜಂಗಮಂ ಹೋದಂತೆ ಹೋಗಿರಲಿ ॥ ೫೪ ॥

ಸಂತತಂ ನಿಜ ಜಂಗಮ ಪ್ರಾ
ಣಾಂತರಂಗಪ್ರಾಣ ಭಾಷೆಯ
ಹೊಂತಕಾಱನು ಬಸವನಿರ್ದಡೆ ಬಾರೆವಾಯೆಡೆಗೆ ।
ಅಂತಕಾಂತಕ ಭಕ್ತರಿದ್ದಹ
ರಂತವರೆ ಸಾಕದಕೆನುತವೆ
ನ್ನಂ ತಗುಳ್ದಡೆ ಬಂದೆನಿಲ್ಲಿಗೆ ನೀವು ಚಿತ್ತೈಸಿ ॥ ೫೫ ॥

ಇದನ್ನಿನಿತು ಪಡಿಹಾರಿ ಹೇಳಲು
ಹೆದಱೆ ಬಸವಂ ತನ್ನನೆಚ್ಚಱ
ಸಿದನು ಮಡಿವಳತಂದೆ ಎನ್ನಸ್ವಾಮಿ ಸಂಗಯ್ಯ ।
ಬದುಕಿಸಿದನೊರೆದೊರೆದು ಮನ ಚಿ
ತ್ತದ ಮಲಿನಮಂ ಕಳೆದು ಭಾಷೆಯ
ನೊದವಿಸಿದನೆನಗೆನುತ ಪ್ರಾಣವನಂತು ಬಿಡಲೊಡನೆ ॥ ೫೬ ॥

ಕೇತಿದೇವನನೊಯ್ದುಡೆಯ್ದದ
ಜಾತನೀ ಬಸವಣ್ಣನಂ ದುರ್
ನೀತಿಯಲಿ ಕೊಂಡೊಯ್ದನಿನ್ನೆಲ್ಲಿಯದು ಸದುಭಕ್ತಿ ।
ಬೀತುದಲ್ಲಾ ಹರಹರಾ ಧಾ
ತ್ರೀತಳದೊಳೆಂದೆನುತ ಭಕ್ತ
ವ್ರಾತವುಮ್ಮಳಿಸುತ್ತವಾ ಪಡಿಹಾರನಂ ನೋಡಿ ॥ ೫೭ ॥

ಹೇಳು ಹೋಗೀ ಹದನನಾ ಮಡಿ
ವಾಳ ಮಾಚಯ್ಯಂಗಳಿಗೆ ನೀ
ಹೇಳೆನಲು ತಾನಲ್ಲಿಗಾಕ್ಷಣವೆಯ್ದಿ ವೈಯಿಕ್ಕಿ ।
ಭಾಳತಟದೊಳು ಕರಯುಗಳವಂ
ಕೀಲಿಸುತ್ತವಧರಿಸು ಕರುಣಾ
ಲೋಲ ಬಸವಂ ಸಂದನಾ ಕೇತಯ್ಯನೊಡನೆನಲು ॥ ೫೮ ॥

ಕೇಳ್ದು ಮಾಚಯ್ಯಂ ಹರುಷಮಂ
ತಾಳ್ದು ಮನದೊಳುಮುತ್ಪುಳಕಚಯ
ವೇಳ್ದು ಸರ್ವಾಂಗದೊಳಗಾನನದೊಳು ಹಸನವೆಸೆಯೆ ।
ಬಾಳ್ದನಲ್ಲಾ ನುಡಿದ ಭಾಷೆಯು
ನಾಳ್ದು ಬಸವಂ ಮೃಡನ ಬೆಡಗಂ
ಗೆಲ್ದನಲ್ಲಾ ಭವದ ಬೇರಂ ಕೀಳ್ದು ಬಿಸುಟನಲಾ ॥ ೫೯ ॥

ಎಂದು ಕೊಂಡಾಡುತ್ತ ಮಡಿವಳ
ತಂದೆಯಾಗಳೆ ಮಠದೊಳಿರ್ದೆ
ತಂದ ಶಿವಗಣತಿಂಥಿಣಿಗೆ ಕೈಮುಗಿದು ಪೊಡವಡಲು ।
ಬಂದಿರೇ ಮಾಚಯ್ಯ ಕುಳ್ಳಿರಿ
ಸಂದ ಶರಣನ ಹಿಂದೆ ಬಸವಂ
ಸಂವ ಪರಿಯಂ ನೋಡು ಭಾಷೆಗೆ ನಿಂದು ಸಂದನಲಾ ॥ ೬೦ ॥

ಆವ ಯುಗದೊಳಗಾವ ಲೋಕದೊ
ಳಾವ ಭೂಮಿಯೊಳಾವ ದೇಶದೊ
ಳಾವ ನಾಡೊಳಗಾವ ಪುರದೊಳಗಾವ ಕಾಲದೊಳು ।
ದೇವ ದಾನವ ಮಾನವರೊಳಾ
ವಾವ ಭಕ್ತರುವೊಳರೆ ಬಸವನ
ಭಾವದಂದದಿ ಜಂಗಮಪ್ರಾಣಿಗಳೆನಿಸಿದವರು ॥ ೬೧ ॥

ಆರನಾಶ್ರಯಿಸುವರು ಜಂಗಮ
ವಾರ ಸಂಗೋಷ್ಠಿಯೊಳಿಹರು ಬಳಿ
ಕಾರನಾಗಳು ಕಾಡುವರು ಬೇಡುವರು ಮನ್ನಾಥಾ ।
ಚಾರು ಗೌರವಲೈಂಗ್ಯಭಕ್ತ್ಯಾ
ಪೂರಿತತ್ರಿವಿಧಪ್ರಸಾದಾ
ಹಾರಸಂತುಷ್ಟಾಂಗ ಬಸವನನೊಯ್ದುರೇಯೆನುತ ॥ ೬೨ ॥

ಗೋಳಿಡುವ ಭಕ್ತರುಗಳಂ ಮಡಿ
ವಾಳ ಮಾಚಯ್ಯಂ ನಿವಾರಿಸಿ
ಹೇಳಿದಪೆನೆಲ್ಲರು ಗಜಬಜಿಸದೆನ್ನ ಬಿನ್ನಪವ ।
ಕೇಳಿ ಜಂಗಮಜೀವಿಯಹ ಕರು
ಣಾಳು ಬಸವನ ಮನವನರಿಯಲು
ಶೂಲಿ ಮೇದರಕೇತಿದೇವನನೊಯ್ದ ಕಾರಣವು ॥ ೬೩ ॥

ಜಂಗಮಾವಳಿಗೊಲಿದು ಮಾಡುವ
ಲಿಂಗವಂತರನಿತ್ತಲಿರಿಸದೆ
ನುಂಗಿಕೊಂಡಿಂತುಗುಳದಿದ್ದಹನಿನ್ನು ಸೈರಿಸೆನು ।
ಅಂಗಜಾರಿಯ ಮೇಲೆ ಹೊಯಿ ಹೊಯಿ
ಡಂಗುರವನೆಂದೆನುತ ಮಾಚ
ಯ್ಯಂ ಗಣಂಗಳ ಮುಂದೆ ಹೊಯ್ವನು ನಭವದುರುತಿರಲು ॥ ೬೪ ॥

ಕೇತಿದೇವಂ ಬಸವರಾಜನು
ಪ್ರೀತಿಯುಂ ಭೀತಿಯುಮೆರಸಿ ಪರಿ
ಪೂತ ಚೇತಸರಾಗಿ ಮಾಚಯ್ಯಂಗೆಜಗಲೊಡನೆ ।
ಆತನುಂ ತಾವಿಬ್ಬರುವಸಂ
ಖ್ಯಾತ ಭಕ್ತಗಣಂಗಳಿಗೆ ಧರ
ಣೀತಳದೊಳಷ್ಟಾಂಗದಂಡಪ್ರಣಮುವಂ ಮಾಡಿ ॥ ೬೫ ॥

ನಿಮ್ಮ ಭೃತ್ಯರು ಬಂದರಿಲ್ಲಿಗೆ
ನಿಮ್ಮ ದಾಸೋಹಂಗಳಂ ಹರು
ಷಂ ಮಿಗಲು ಮಾಡಿಸಿಕೊಳುತ್ತಂ ಮುನ್ನಿನಂದದಲಿ ।
ನಿಮ್ಮ ಕಾರುಣ್ಯಪ್ರಸಾದವ
ನೊಮ್ಮೆಯುಂ ಕೊಟ್ಟುದ್ಧರಿಸಿ ನೀ
ವೆಮ್ಮನೆನುತಂ ಮಾಚಿದೇವನು ಮತ್ತೆ ಶರಣೆನಲು ॥ ೬೬ ॥

ಅವರ ಚರಣಯುಗಕ್ಕೆ ವಂದಿಸು
ತವರ ನಿರ್ಮಳ ಬೋಧೆಯಂ ತಿಳಿ
ದವರ ಕಾರುಣ್ಯಪ್ರಸಾದಾಮೃತದೊಳೋಲಾಡಿ ।
ಅವರ ನಿಜ ಭಕ್ತಿಸ್ಥಳದ ಮ
ರ್ಮವನಱಿದು ಕೇತಯ್ಯನುಂ ಮಂ
ತ್ರಿವರ ಬಸವಂ ತನ್ನರಮನೆಗೆ ಬಂದನೊಲವಿಂದ ॥ ೬೭ ॥

## ೩. ಶಿವನಾಗಮಯ್ಯನ ತನುವಿನಲಿ ತೋಱುವೆನು ಹಾಲನು

ಮತ್ತೆಯುಂ ಸದ್ಭಕ್ತಿ ಸದ್ಗುಣ
ವೆತ್ತನುರುತರ ಕೀರ್ತಿ ಭಕ್ತಿಜ
ನೋತ್ತಮಂ ಶಿವನಾಗಮಯ್ಯಂ ಸದಮಳಾಚಾರ ।
ಚಿತ್ತಶಕ್ತನು ಬಸವನಿಂ ಪ್ರಣಿ
ಪತ್ತಿಯಂ ಕೈಕೊಳುತ ಸಂತಸ
ವೆತ್ತು ಭಕ್ತಿಸುಖಾಮೃತದೊಳೋಲಾಡುತಿರಲು ॥ ೧ ॥

ಮಟ್ಟಿಗರು ತಮ್ಮೊಳಗೆ ಗುಜುಗುಜು
ಗುಟ್ಟುತಂ ನಡೆತಂದಸಹ್ಯಂ
ಬಟ್ಟು ಬಿಜ್ಜಳರಾಯನೊಡನಿಂತೆಂದು ಹೇಳಿದರು ।
ಪಟ್ಟಬದ್ಧನೆ ಚಿತ್ತಯಿಸು ಕುಲ
ಗೆಟ್ಟು ವಿಪ್ರಾಚಾರಮಂ ನೆಱೆ
ಬಿಟ್ಟು ನಾಚಿಕೆಯುಳಿದುಳಿದು ಬಸವಯ್ಯ ತಾನಿಂತು ॥ ೨ ॥

ಹಿರಿಯ ಭಕ್ತರು ಹಿರಿಯಭಕ್ತರು
ಹಿರಿಯ ಭಕ್ತರೆನುತ್ತವವರಂ
ಹಿರಿದು ಮನ್ನಿಪನವರ ಕಾಲ್ಗಳ ಮೇಲೆ ಬೀಳುವನು ।
ಮರಳೆ ತಾಸವಸುಂಡು ಮಿಕ್ಕುದ
ನಿರದೆ ಕೊಂಬನು ಕೈಯನಾಂತೋ
ಸರಿಸದನುದಿನವವರನೇ ಕೊಂಡಾಡುವಂ ಬಳಿಕ ॥ ೩ ॥

ಹೆದಱದತಿ ಸಭ್ಯಸವೊಲಸುಸಯು
ವ್ವೆದಗಿ ನಿಮ್ಮಂ ಸಾರ್ದಪಂ ಮಾ
ಣದೆ ನಿಜಾಂತರ್ವಾಸಮಂ ಪುಗುವಂ ಬಳಿಕ ತಾನು ।
ಹದುಳಿರಿಸಿಕೊಂಡಿದ್ದ ಭಕ್ತನು
ಮದಿಸಿ ಪುರವೀಥಿಯಲಿ ಬರುತಂ
ಬೆದಱ ಸಂಜೊಳಿಯೆನ್ನನೆಮ್ಮುವನಿನಿತು ಬಗೆಗೊಳ್ಳ ॥ ೪ ॥

ಬಲ್ಲಹನೆ ಕಲ್ಯಾಣಕಟಕವ
ದೆಲ್ಲವುಂ ಹೊಲೆಗಲಸಿಹೋಯಿತು
ಎಲ್ಲಿಯುವು ವರ್ಣಾಶ್ರಮಂಗಳವೆಲ್ಲಿ ನೀತಿಗಳು ।
ಎಲ್ಲಿಯುವು ಧರ್ಮಪ್ರವೃದ್ಧಿಗ
ಳೆಲ್ಲಿಯದು ಯಜ್ಞಾದಿಕರ್ಮವಿ
ವೆಲ್ಲಮಂ ತಾಂ ಹೇಳಲೇನಿನ್ನೆಂತು ಸಂದಹವು ॥ ೫ ॥

ಧ್ರುವವಲಾ ರಾಜಾಗತೋಧ
ರ್ಮವು ವಿದಿತವಿದ ನೀವಱಿಯಿರೇ
ಅವನಿವಲ್ಲಭ ಎನಲು ಕೋಪಾಟೋಪ ರೂಪದಲಿ ।
ತವಕಿಸುತ ಬಿಜ್ಜಳನು ಬಸವಸ
ಚಿವವರನನಾಗಳೆ ಕರೆಸಲು
ತ್ಸವದಿನಾ ಭಂಡಾರಿಯುಂ ಶಿವನಾಗಮಯ್ಯಗಳ ॥ ೬ ॥

ದಂಡಿಗೆಯನೇಱಿಸಿ ನಿಗಮವಿದ
ಪಂಡಿತನು ಕೈಗೊಟ್ಟವರನೊಡ
ಗೊಂಡು ಬರುತಿರಲಾ ಮಹಿಸುರರೈಸು ದೂರದಲಿ ।
ಕಂಡು ನೀವದ ನೋಡಿರೇ ಭೂ
ಮಂಡಳೇಶ್ವರ ಅಂತಿರದೆ ಮುಂ
ಕೊಂಡು ತಾನೈತಂದಹನು ಹೊಲೆಗಲಸಲೀಯೆಡೆಗೆ ॥ ೭ ॥

ಅಳುಕನಿನುತುಂ ನೋಡ ತಾನಂ
ದಳವನೇಱಿಸಿ ಆತನಂ ನೃಪ
ನಿಳಯಕೆಯಿತಂದಹನು ಬಸವಾಮಾತ್ಯನಿನ್ಮಾರ್ಗೆ ।
ಬಳುಕಿದಹನೆಂದೆನಲು ಕೋಪಂ
ಬಲಿದು ಬಿಜ್ಜಳನರಮನೆಯ ಬಾ
ಗಿಲೊಳು ಪುಗದಂತೋಲಗಂಗೊಟ್ಟಂತು ಹೋಜಗಿರಲು ॥ ೮ ॥

ಜೇಗದಿಂ ಬಗೆಗೊಳ್ಳದಂಜದೆ
ಹೋಗಿ ಬಸವಣನುದ್ದಗದ್ದುಗೆ
ಯಾಗಿ ತನ್ನಯ ಹೊದಕೆಯಂ ತೆಗೆದಿಳೆಯ ಮೇಲಿರಿಸಿ ।
ನಾಗಮಯ್ಯನನಲ್ಲಿ ಮನದನು
ರಾಗದಿಂ ಕುಳ್ಳಿರಿಸಿ ಎನ್ನುವ
ನೀಗ ಕರೆಸಿದ ಮಣಿಹವೇನೆನಲರಸು ಭುಗಿಲೆನುತ ॥ ೯ ॥

ಕಲುಷಿತಾನನನಾಗುತಂ ಬಿ
ಜ್ಜಳನೃಪಂ ಬಸವಣ್ಣಗೆಂದನು
ಸಲುವದಷ್ಟಾದಶವಿವರ ವರ್ಣಂಗಳಾದಿಯುಲಿ ।
ಇಳೆಯೊಳಿವು ತಾನೀಗಲಾದವೆ
ಹೊಲೆಗಲಸಿ ಕುಲಸಂಕರವನ
ಗ್ಗಳಿಸಿ ಈ ಕಲ್ಯಾಣಕಟಕವನಿಂತು ಕೆಡಿಸುವರೇ ॥ ೧೦ ॥

ಮಲಹರನ ಸದ್ಭಕ್ತಿ ನಿನ್ನಯ
ತಲೆಯೊಳಾಯಿತೆ ನೀತಿಗಳನತಿ
ಗಳೆದು ನಡೆಯುತ್ತಿಪ್ಪೆ ಸುರಿದಹವೇ ಮಳೆಗಳಿನ್ನು ।
ಬೆಳೆವವೇ ನೀನಿರ್ದ ಧರೆ ನಿ
ರ್ಮಳದೊಳಿರು ನಾವಂಜುವೆವು ನಿನ
ಗುಳಿದು ಮಾತೇನೆನಲು ನೃಪತಿಗೆ ಬಸವನಿಂತೆಂದ ॥ ೧೧ ॥

ಸುರನದಿಗೆ ಪಳ್ಳಂಗಳೆಣೆಯೇ
ಸುರಗಿರಿಗೆ ಬೆಟ್ಟಂಗಳೆಣೆಯೇ
ಸರಿಯೆ ಸುರಧೇನುಗೆ ಪಶುಗಳಹಿಪತಿಗಹಿಗಳೆಣೆಯೆ ।
ಹರನೊಡನೆ ಮೇಣಿತರ ದಿವಿಜರು
ಸರಿಯಹರೆ ಶಿವನಾಗಮಯ್ಯಗೆ
ದುರುಳ ಭೂಸುರರೀ ಧರೆಯೊಳೆಣೆಯಲ್ಲದೆಂತೆನಲು ॥ ೧೨ ॥

ಹೊಲೆಯನಾದಡೆ ಶಿವನನರ್ಚಿಸಿ
ಕುಲಜನಪ್ಪನು ಜಾತಿನೇಣಿನ
ಹೊಲೆಯರಿಗೆ ಹುಸಿಗಳನುಸುರುತಿಹ ಹೊಲೆಯರಿಗೆ ಹುಸಿಯ ।
ಹೊಲೆಯರಿಗೆ ಹೊಲೆಯರಿಗೆ ಕೀಳಿನ
ಹೊಲೆಯರಿಗೆ ಶಿವಭಕ್ತಿಮಹಿಮೆಯ
ದಳವಿಯೇ ತಿಳಿಯಲಿಕೆ ಬಿಜ್ಜಳಧರಣಿವರ ಕೇಳು ॥ ೧೩ ॥

ಆಗದಿಹುದೇ ಸಿದ್ಧರಸ ಸಂ
ಯೋಗದಿಂ ಸೌವರ್ಣಮುಂ ಚೆ
ನ್ನಾಗಿ ಶುಕ್ತಿಯೊಳೊಂದಿ ತಾಮ್ರವಹಂಗೆ ಲೋಕದೊಳು ।
ಶ್ರೀಗುರುಕರಸ್ಪರುಶನದಿ ಪರಿ
ಭಾಗಿಸಲು ಕುಲವೊಂದೆಯಲ್ಲಾ
ಆಗಮೋಕ್ತಿಯೊಳಿಂತು ಅಂತ್ಯಜನಾದಡಗ್ರಜನು ॥ ೧೪ ॥

ಇಳೆಯೊಳೀ ಭೂಸುರರ ಗುರು ಕ
ಬ್ಬಲಿಗನಲ್ಲಾ ವ್ಯಾಸನೊಗೆದನು
ಕುಲಜರೆಲ್ಲರೊಳಗ್ರಜನ್ಮನು ಋಷಿ ವಸಿಷ್ಠನಲಾ ।
ತೊಳಸಲೇನೂರ್ವಸಿಗೆ ಜನಿಸಿದ
ಅಲಘು ಮುನಿ ಮಾತಂಗನೆಂಬ
ಗ್ಗಳೆಯನುದ್ಭವಿಸಿದನಲಾ ಮಾತಂಗಿಯುದರದಲಿ ॥ ೧೫ ॥

ಶುನಕ ಗರ್ದಭ ಕೀರ ದರ್ದುಗ
ವನಚರೋಷ್ಟ್ರ ಕುರಂಗವಾದಿಕ
ಜನಿತ ಸನ್ಮುನಿವಲ್ಲಭರ ಜನ್ಮಂಗಳೆಲ್ಲವಿವು ।
ಘನಶಿವಾರ್ಚನೆಯಿಂದಲಾ ಪಾ
ವನವೆನಿಸಿ ವಿಖ್ಯಾತಿವೆತ್ತರು
ಜನರಮಣ ಈ ವಿಪ್ರರಜ್ಞಯರೆ ಎಂದೆನಲು ಕೇಳ್ದು ॥ ೧೬ ॥

ಬಗುತರುಗಳಂ ಚಿವುಟಿದೊಡೆ ಹಾ
ಲುಗುವವೇ ಪೆಜರಂ ಚಿವುಟಿದೊಡೆ
ಉಗುವುದದು ರಕ್ತವು ಬಳಿಕ್ಕೀ ವರ್ಗವೆಂಬುದನು ।
ಜಗದೊಳೆಂದುಮನಱಿಯೆವೆಂಬಾ
ಜಗತಿಯೊಡೆಯನ ನುಡಿಗೆ ಮೆಲ್ಲನೆ
ನಗುತ ಬಸವಾಮಾತ್ಯನೈಸಱಿಳೆದ್ದು ತಾನೆಂದ ॥ ೧೭ ॥

ವೇದ ಭಾರಕ್ರಾಂತರೆನಲಿಹ
ಮೇದಿನೀಸುರ ಗಾರ್ದಭಾಧಮ
ರಾದವಂದಿರ ಕೂಡೆ ಭೃಗುಶಾಪೋಪಗತರಾಗಿ ।
ವೇದನಾವಸ್ಥೆಗಳೊಳಿಪ್ಪ ನಿ
ಷಾದ ಕರ್ಮಶ್ವಪಚರೊಡನೆ ಅ
ನಾದರದಿ ಪಶುವಂ ಕೊಲುವ ಪಶುಕರ್ಮಿಗಳ ಕೂಡೆ ॥ ೧೮ ॥

ಆನು ಕೊಲ್ಲೆನು ನೇಣು ಕೊಂದಿತು
ತಾನೆನುತ್ತಿಹ ಪಾರ್ಬರೊಡನಾ
ಸ್ಥಾನದೊಳ್ ಪ್ರತಿನಿಂದು ನುಡಿದೊಡೆ ದೋಷವೊಂದುವು ।
ನಾನಿದಂ ಪ್ರತಿದೋಱದಿರ್ದಡೆ
ಹೀನವಲ್ಲಾ ಭಕ್ತಿ ಭಾಷೆಗೆ
ಮಾನವೇಶ್ವರ ನೋಡು ನೀವೆಂಬಂತೆ ದೃಷ್ಟದಲಿ ॥ ೧೯ ॥

ಜನವಱಿಯೆ ಶಿವನಾಗಮಯ್ಯನ
ತನುವಿನಲಿ ತೋಱುವೆನು ಹಾಲನ
ವನಿಸುರರೊಳೀ ಸೋಮಯಾಜಿಸಿಪ್ಪನಂ ಕೊಯ್ದು ।
ಇನಿತು ನೀರಂ ತೋಱಿರೇ ಧಿ
ಕ್ಕನೆ ಇದಕೆ ಆಱದಡೆ ನಿಮ್ಮವ
ರಿನಿಬರಂ ಪಟ್ಟಣದ ಸುತ್ತೆಳೆಹೂಟೆ ಹೂಡಿಸುವೆ ॥ ೨೦ ॥

ಎಂದು ರಾಯನ ವಿಪ್ರರನುಮತ
ದಿಂದ ಬಸವಾಮಾತ್ಯನತ್ಯಾ
ನಂದದಿಂ ಶಿವನಾಗಮಯ್ಯಂಗಖಿಳ ತನುವೆರಸಿ ।
ವಂದಿಸುತ್ತವೆ ಶಿವಪಸಾಯತ
ವೆಂದೆನಿಪ ಶಸ್ತ್ರಕ್ಕೆ ಹಸ್ತಂ
ಸಂಧಿಸುತ್ತಂ ಸರಸವಾಡುವ ಹಾಂಗೆ ಲಾಲಿಸುತ ॥ ೨೧ ॥

ಶರಣ ನಾಗಮ್ಮಯನ ಕರಸ್ಥಳ
ಸರಸಿರುಹವಂ ತನ್ನ ಹಸ್ತಾಂ
ಬುರುಹಯುಗದಿಂ ಹಿಡಿದು ಮೆಲ್ಲನೆ ಒತ್ತುತಿರಲೊಡನೆ ।
ಅರರೆ ಚಿಮ್ಮಿಸುತಂಬರಂಬರೆ
ಹಿರಿದು ಸೆಗೆದಾವರಿಸಿ ಪರ್ಬಿ
ತ್ತರಿದೆನಲು ಶಿವಭಕ್ತಿಯೆಂಬಾ ಕಾಮಧೇನುವನು ॥ ೨೨ ॥

ಧರಣಿಯೊಳು ಬಸವಂಗೆ ಸಲೆ ಮೊಲೆ
ತೊರೆದು ಕಱೆವಂತಾಯ್ತು ಭರ್ಗನು
ಕರುಣದಿಂ ಕರಿಕಾಲಚೋಳಂಗಂದು ಹೆಮ್ಮಳೆಯ ।
ಸುರಿಸಿದನು ಮೇಣಿಂದುಲೋಕಂ
ನೆರೆದು ಪೊಗಳಲು ದಂಡನಾಥಂ
ಗುರು ಸುಧಾರಸವೃಷ್ಟಿಯಂ ಕಱೆಸಿದನು ಶಂಕರನು ॥ ೨೩ ॥

ಅತುಳ ದಿವ್ಯಾಮೃತ ನವೀನ
ದ್ಯುತಿ ಬೆಳಗೆ ಸುವ್ಯಕ್ತವಾಗಿ
ಸ್ಥಿತಿ ಜಗತ್ರಯದೊಳಗಮರ್ದಿರೆ ಭಕ್ತಸಂದೋಹ ।
ಅತಿಶಯೋನ್ನತ ಲಿಂಗಸುಖ ಸಂ
ಯುತ ಮನೋಂಬುಜರಾಗಿ ನೋಡಲು
ಕ್ಷಿತಿಪ ಬಿಜ್ಜಳನದುಭುತಾಕ್ರಾಂತಾಕಲಿತನಾಗಿ ॥ ೨೪ ॥

ಬಂದು ಶಿವನಾಗಯ್ಯನವರಿಗೆ
ವಂದಿಸುತ್ತಂ ಮುನ್ನ ಜಯ ಜಯ
ಎಂದು ಸರ್ಬರು ಹಸ್ತಮುಕುಳಿತರಾಗಿ ಹೊಡವಡುತ ।
ಮಂದಮತಿಗಳನಧಮಜೀವಿಗ
ಳಂ ದುರಾತ್ಮರನಧಿಕ ಪಾತಕ
ರಂ ದಯಾರ್ದ್ರೀಭೂತಭಾವದಿ ನೋಡಿ ಎಲ್ಲರನು ॥ ೨೫ ॥

ಶರಣುವೊಕ್ಕೊಡೆ ಕಾಯ್ವು ಸಲಹುವ
ಬಿರಿದು ನಿಮ್ಮದಿದಂ ಮಱೆವರೇ
ಪರಮಪುರುಷಾ ಎನುತಭಯವಂ ಬೇಡುತಲ್ಲಿರ್ದ ।
ಧರಣಿಸುರರಂ ಕಾಯ್ದು ಕರುಣಾ
ಸರಸಲೋಚನದಿಂ ಕಟಾಕ್ಷಿಸಿ
ದರಹಸಿತಮುಖಕಮಳನಾಗುತ ದಂಡನಾಯಕನು ॥ ೨೬ ॥

ಒಸಗೆ ಮಿಗೆ ಶಿವನಾಗಮಯ್ಯನ
ನಸಮ ದಂತಾವಳಮನೇಱಿಸಿ
ಬಸವರಾಜನು ತಾನುಮಾತನ ಹಿಂದೆಸೆಯೊಳೇಱಿ ।
ಜಸವೆಸೆಯ ತನ್ನರಮನೆಗೆ ಸಂ
ತಸದೊಳೆಯ್ದಿದನೆಂದಿನಂದದೊ
ಳೊಸೆದು ಭಂಡಾರಿಯ ಮನೆಯೊಳಾ ಅಯ್ಯನಿರುತಿರ್ದ ॥ ೨೭ ॥

## ೭. ಘೋರ ವಿಷಮಂ ಕುಡಿದು ಬದುಕುವರಾರು ?

ಅವಿರಳಿತ ಶಿವಭಕ್ತಿಯೆಲ್ಲಾ
ಭುವಿಗಳೊಳು ಪಸರಿಸಿ ನಿಮಿರ್ದಿರೆ
ಅವಿರತಂ ಸವಿಶೇಷದೃಷ್ಟಪ್ರತ್ಯಯಂಗಳಲಿ
ವಿವಿಧಯುಕ್ತಿಗಳಿಂದೆ ತೋಱು
ತ್ತವಘಡಿಸಿ ನಿಜ ವೀರಭಕ್ತ
ಪ್ರವರಸಂತತಿ ಪೆಂಪೆಸೆದು ಪರಮಾನುರಾಗದಲಿ ॥ ೧ ॥

ವೀರಮಾಹೇಶ್ವರನಿರೂಪಾ
ಚಾರದಲಿ ಲಿಂಗಪ್ರಸಾದಾ
ಪಾರ ಭೋಗಿಗಳಾಗಿರುತ್ತಿರೆ ಕಬ್ಬಿಲರು ನೆರೆದು ।
ಧಾರುಣೀಶನನೆಯ್ದಿ ಸರ್ವಶ
ರೀರವೊಂದಲು ನಮಿಸಿ ಜೀಯವ
ಧಾರು ನಿಮ್ಮಯ ಪುರದೊಳುತ್ಪಾತಂಗಳಾಯಿತ್ತು ॥ ೨ ॥

ಶೈವದೀಕ್ಷಾಮುಖ್ಯರೆಲ್ಲರು
ತಾವಿದಾವ ಮತಂಗಳೋ ಇವ
ನಾವಜಱಿಯೆವಾ ಬಸವರಸನುಂ ಭಕ್ತರಂ ನೋಡಿ ।
ಆವಗಂ ಲಿಂಗೈಕ್ಯರೆನುತಂ
ಸೇವಿಸುತ್ತಿಹರಾ ಪ್ರಸಾದವ
ನೇವೆವೆಮಗಿನಿತಾದೊಡಂ ಕೊಡಲೊಲ್ಲದೀ ಊರು ॥ ೩ ॥

ಪುರದೊಳಾಗಳೆ ವೀರಮಾಹೇ
ಶ್ವರರೆನಿಸಿ ತಾವೀಗಳೇತಕೆ
ಧರಣಿಯೊಳು ಸಲಲೀಸುವೆವು ನಿಮಗೆನುತ ಧಿಕ್ಕರಿಸಿ ।
ನೆರೆದ ಭಕ್ತರು ಬಸವರಸನಿಂ
ತೊರೆದ ದುರ್ಮಂತ್ರಂಗಳಿಂದಾ
ಸುರದೊಳೆವ್ಮೊಡನೆಯ್ದೆ ಬದ್ಧ ವಿರುದ್ಧರಾದಹರು ॥ ೪ ॥

ಸಲಿಸು ನೀತಿಯಿದಲ್ಲವೆಂದವ
ರ್ಗಳಿಗೆ ಹೇಳಿ ಅಲ್ಲದೊಡೆ ನೀ
ವೆಲೆ ಮಹೇಶ್ವರ ಕೇಳು ನಿಮ್ಮರಮನೆಯ ಬಾಗಿಲಲಿ ।
ಜ್ವಳನ ಕೊಂಡವನಿಕ್ಕಿಕೊಂಡೀ
ಬಳಗವೆಲ್ಲಂ ಬಂದು ಪೇರುರಿ
ಯೊಳಗೆ ಬೀಳುವೆವೆನಲರಸನತಿ ಕುಪಿತಮುಖನಾಗಿ ॥ ೫ ॥

ಬಸವನಂ ಬರಹೇಳ್ದು ಕಳುಹಲು
ಬಸವನಾಗಳೆ ಕೇಳ್ದು ಬಂದಾ
ವಸುಮತೀಶನ ಮುಂದೆಸೆಯೊಳಿರಲಾತನಿಂತೆಂದ ।
ಬಸವ ನೆತ್ತರುಗೊಡುಗೆ ಕಬ್ಬಿಲ
ರೊಸಗೆಯಂ ಕೊಡು ನಿಮಗವಂದಿರ
ಘಸಣಿಯೇಕೆ ಶಿವಪ್ರಸಾದವನುಂಬುದಾವುದಿದು ॥ ೬ ॥

ಆದಿಮಾರ್ಗವೊ ಬಲುಮೆಯೋ ಇದ
ಸೋದಿ ಹೇಳಲ್ಲದೊಡೆ ಮತ್ತೀ
ನಾದಡಂ ಕಾರ್ಯಂಗಳುಳ್ಳಡೆ ಅಡಿಕೋ ಇದನು ।
ಮಾದು ಸುಮ್ಮನೆ ಉಣುತಿಹುದು ಮರಿ
ಯಾದೆಯೋ ನಿಮಗೆನಲು ಬಸವಂ
ಮೇದಿನೀಶ್ವರನಗ್ರದಲಿ ತಾನಪರಿಗಿಂತೆಂದ ॥ ೭ ॥

ಇಲ್ಲಿ ಉಂಟೇ ಶಿವಪ್ರಸಾದವ
ನಲ್ಲಿ ಚಂಡೇಶಂಗೆ ಗೌರೀ
ವಲ್ಲಭಂ ಕೊಟ್ಟಂದವಂ ನೀವಱಿಯದಡೆ ಕೇಳಿ ।
ಬೆಳ್ಳಿಯಲಿ ಹೊನ್ನಲ್ಲಿ ಮಾಣಿಕ
ದಲ್ಲಿ ಮಾಡಿದ ಲಿಂಗಸಂಕುಳ
ದಲ್ಲಿ ಪಟದಲಿ ಬಾಣಲಿಂಗದೊಳಿಷ್ಟಲಿಂಗದಲಿ ॥ ೮ ॥

ಇಲ್ಲ ಇಂತಿವರಲಿ ಪ್ರಸಾದಂ
ಸಲ್ಲದೀಶ್ವರನಾಗಮಂಗಳು
ಸೊಲ್ಲುವವು ಮುನ್ನಹಗೆ ಶಿವಲಿಂಗಪ್ರಸಾದವಿದು ।
ಎಲ್ಲರುಂ ಕೇಳಿಮ್ಮ ಭಕ್ತರಿ
ಗಲ್ಲದೇ ಮಿಕ್ಕಿನ ನರರಿಗತಿ
ದುರ್ಲಭಂ ಲಿಂಗಪ್ರಸಾದಂ ಧರಿಸಲುಂ ಕೊಳಲು ॥ ೯ ॥

ಮಾನಿತೋರು ಶಿವಪ್ರಸಾದಾ
ನೂನಸುಖವೊಂದುವುದೆ ಪರರಿಗೆ
ಆನೆಗಿಕ್ಕುವ ಹಲ್ಲಣಂ ಕತ್ತೆಗಳಿಗೇಕಹುದು ।
ಏನನೆಂಬೆವು ನಿಮ್ಮನೆನಲ
ಜ್ಞಾನಿಗಳಿರಾ ಕಣ್ಣಕಾಣಿರೆ
ಈ ನುಡಿಗಳೇಕಿಂತು ತೆಗೆದೆವೆ ನಿಮ್ಮ ಸಾಮ್ಯವನು ॥ ೧೦ ॥

ವೈರವೇಕೆಮ್ಮೊಡನೆ ಬಱಿದೇ
ಹೋರುತಿರವೇಡೆನಲವದಿರವಿ
ಚಾರದಿಂದ ಬಸವರಸನೊಡನಿಂತೆಂಪರಗ್ಗಳಿಸಿ ।
ವಾರಣಾಸಿಯೊಳುಂಟು ಯುಗಕೇ
ತಾರದಲಿ ಸೌರಾಷ್ಟ್ರದಲಿ ವಿ
ಸ್ತಾರ ದ್ರಾಕ್ಷಾರಾಮದೊಳು ಶ್ರೀಗಿರಿಯು ಮೊದಲಾದ ॥ ೧೧ ॥

ಆಗಮಸ್ಥಾನಂಗಳೊಳಗೆಮ
ಗಾಗಳುಂ ಸಲುತಿರಲು ನೀವಿಂ
ತೀಗಳಿನಿತಂ ಸಲ್ಲಲೀಸರಿ ತತ್ಪ್ರಸಾದವನು ।
ಭೋಗಿಪೆವು ಮೊದಲ್ತೊಡಗಿ ಬಲ್ಲಿದ
ರಾಗಿ ನೀವೀಯದಡೆ ಸುಮ್ಮನೆ
ಹೋಗೆವಿಲ್ಲಿಯೆ ಸಾವೆವಲ್ಲದೆ ಎಮ್ಮ ವೃತ್ತಿಯನು ॥ ೧೨ ॥

ಬಿಡುವೆವೇ ಎಂದೆನುತ ಬೇಡರು
ಗಡಬಡಿಸಿ ಒಬ್ಬೊಬ್ಬರೆದ್ದವ
ಘಡಿಸಿ ನುಡಿಯಲು ಬಸವನವರಂ ನೋಡಿ ನಸುನಗುತ ।
ಬಿಡದೆ ತಜಿಗೆಲೆ ಹಾವುಗದಲ್ಲದೆ
ನಡುಗುವುದೆ ಗಿರಿ ಗಾಳಿಗಬ್ಧಿಗೆ
ಕಡೆಗೆ ಬೆಂಡುಗಳೇಳ್ವವಲ್ಲದೆ ನೆಗೆವವೇ ಗುಂಡು ॥ ೧೩ ॥

ಆವ ನಾಡೊಳಗಾವ ಪುರದೊಳ
ಗಾವೆಡೆಯೊಳಂದಿಂದು ಶಿವಭ
ಕ್ತಾವಳಿಯ ಮನೆಗಳಲಿ ಕೊಳುವಡೆ ಉಳ್ಳೊಡದನಜುಪಿ ।
ನೀವು ಕೊಳ್ಳಿರೆ ನಾವು ಕೊಡುವೆವು
ಶೈವರಾಗಿಯುಮವರು ಶಿವನಿ
ಷ್ಠಾವಧಾನಿಗಳಾದವರು ಲಿಂಗಪ್ರಸಾದವನು ॥ ೧೪ ॥

ಮುಟ್ಟಲೀವರೆ ನೋಡಲೀವರೆ
ಕೆಟ್ಟ ನುಡಿಗಳನಾಡದಿರಿ ಮತಿ
ಗೆಟ್ಟವಂದಿರಿರಾ ಇದೇತಕೆ ಹೆಣಗುತಿದ್ದಪಿರಿ ।
ನೆಟ್ಟನಿಷ್ಟಶಿವಪ್ರಸಾದವ
ಕೊಟ್ಟೆನನ್ಯರಿಗಿದಕೆ ಚಿತ್ತಂ
ನಟ್ಟುಕೊಂಬಡೆ ಕೊಳ್ಳಿ ಕೇಳಿನ್ನೊಂದನುಸುರ್ದಪೆನು ॥ ೧೫ ॥

ಸೂರ್ಪಕಪ್ರಹರಪ್ರಹಾರಿಗೆ
ದರ್ಪಿತ ತ್ರಿಪುರೇಂದ್ರನಾಗ್ನಿಗ
ಹರ್ಪತಿಪ್ರಣುತಪ್ರಭಾವುಯ ದಿವ್ಯದೇಹಂಗೆ ।
ಸರ್ಪಭೂಷಣ ಸಂಗಮೇಶಂ
ಗರ್ಪಿಸುವೆನಿಂದುಗ್ರ ಗರಳವ
ನಾರ್ಪವರು ಬಂದೀ ಪ್ರಸಾದವನೀಸಿಕೊಳ್ಳಿರಯಾ ॥ ೧೬ ॥

ಕೊಡುವೆವಿದಕಿನ್ನಾಱದಡೆ ನಡೆ
ನಡೆಯಿನಿಬರುಂ ನೀವೆನಲು ಸಿಡಿ
ಮಿಡಿಗೊಳುತ ಬಸವಯ್ಯನಕಟಾ ಒಮ್ಮೆ ಯೆಮ್ಮುವನು ।
ಮುಡಿಹಿಸಲ್ಕಿಂದೊಂದುಪಾಯಂ
ಬಡೆದು ಲೇಸಾಯ್ತ್ತಸವು ವಿಷಮುಂ
ಕುಡಿಸಿ ಕೊಂಜೆಹೆನೆಂದು ನೆನೆದನು ಭೂಪ ಚಿತ್ತೈಸು ॥ ೧೭ ॥

ಪೊಡವಿಯೊಳು ಶಿವಭಕ್ತರಾರಾ
ದಡೆ ವಿಷವ ನಂದೀಶ್ವರಂಗಂ
ಕೊಡುವರುಳ್ಳರೆ ಕೊಡು ಬಳಿಕ ಹೇಳಾವನಾದೊಡೆಯು ।
ಮೃಡನು ಕೈಕೊಂಡ ಪ್ರಸಾದವ
ಕಡುವಿಷವನಿಂತುಂಡ ಠಾವು
ಳ್ಳಡೆ ಬಿಡದೆ ನಾವೀಸಿಕೊಂಬೆವಿವೇಕೆ ಟೊಕಳಿಗಳು ॥ ೧೮ ॥

ಭೋಗಿಸುವುದೊಳ್ಳಿಹ ರಸಾಯನ
ದೋಗರಂಗಳು ನಿಮ್ಮ ಭಾಗವಿ
ದಾಗಿ ಹಾಲಾಹಲ ಮಹಾಪ್ರಳಯದ ಗರಳವೆಮ್ಮ ।
ಭಾಗವೇ ಇದನೆಹಗೆ ಕುಡುವಿರಿ
ನಾಗಕಟಂಕಗಿತ್ತು ವಿಷಮುಂ
ಠಾಗದಿಂ ನೀವುಂಡು ಸಾಯದೊಡಾ ಪ್ರಸಾದವನು ॥ ೧೯ ॥

ನೀವು ಕೈಕೊಂಡನುಭವಿಸುತಿರೆ
ನಾವು ಬೇಡೆವು ನಿಮಗೆ ಗೆಲವಿ
ನ್ನಾವೆಡೆಯೊಳೆರಡಕ್ಕೆ ಭಾಷೆಗಳೆಂದೊಡಂಬಡಲು ।
ಭೂವರನು ಉಭಯಾನುಮತದೊಳು
ದೇವ ದೇವನ ದೇಗುಲಕ್ಕೆ ಜ
ನಾವಳೀಯುತನಾಗಿ ತಾನೆಯಿತಂದನ್ಯೆಸಜಲಿ ॥ ೨೦ ॥

ಒಡಲುಗೊಂಡ ತಮಂಧ ಪಟವೋ
ನಡೆವ ನೀಲಾದ್ರಿಗಳೊ ಕೈಕಾಲ್
ಪಡೆದ ಕಜ್ಜಳಗಿರಿಗಳೋ ಕರ್ಬೊನ್ನ ಭಿತ್ತಿಗಳೋ ।
ನುಡಿಗಲಿತ ಮಾತಂಗಸಂಗವೊ
ಹೆಡೆ ಉಡುಗಿದಸಿತಾಹಿಗಳೊ ಎನ
ಲೆಡವಿಡದೆ ಸಂದಣಿಸಿ ಬೇಡರು ಬಂದರಾಯೆಡೆಗೆ ॥ ೨೧ ॥

ಓಳಿಗೊಂಡು ಸಮಸ್ತಭಕ್ತ ಜ
ನಾಳಿಸಹಿತಂ ಬಸವಮಂತ್ರಿ ಶಿ
ವಾಲಯಕೆ ನಡೆತಂದು ಪರಮಾನಂದದಿಂದಂದು ।
ಕಾಲಕೂಟಂ ವತ್ಸನಾಭಿಯು
ಹಾಲಹಲಮುಂ ಶಿಂಗಿ ಮೊದಲಾ
ಭೀಳಗರಳಂಗಳನವೆಲ್ಲಂ ಕಲಸಿ ಅರೆಯಿಸಲು ॥ ೨೨ ॥

ನಿಟಲನಯನನ ಮೂಜನೆಯ ವಿ
ಸ್ಫುಟಿತರಾಂಬಕ ಪಾವಕನವೊಲು
ಛಿಟಛಿಟಲು ಭುಗಿಭುಗಿಲೆನುತ ಕೊಂಬೆಗೆ ಸೆಗೆವುತಿರಲು ।
ಚಟುಲ ವಿಷವು ವಿಷೋಗ್ರಕೀಲಾ
ಪಟಲವಂಬರವಂ ಮುಸುಕಲಾ
ಪಟುದಹನಮಂ ಕಂಡು ಕೆಟ್ಟೋಡಿದನು ಭಾಸ್ಕರನು ॥ ೨೩ ॥

ಘೋರ ವಿಷಮಂ ಕುಡಿದು ಬದುಕುವ
ರಾರೆನುತ ನಡನಡುಗಿ ಕಾಣುತ
ದೂರದೂರಕೆ ಬೇಡರೋಡಲು ಬಸವರಸನಾಗ ।
ಸ್ಮೇರಮುಖನಾಗುತ್ತ ಕೂಡಿದ
ಪಾರಪಟುಗರಳಂಗಳೆಲ್ಲಂ
ಭೂರಿಯಾಗಲು ಪೊನ್ನಕೊಪ್ಪರಿಗೆಗಳೊಳಗೆ ತೀವಿ ॥ ೨೪ ॥

ಚಂಡವರವರದಂಗೆ ದಶಶತ
ಚಂಡಕರ ಭಾಭಾಂಗರೋಚಿಗೆ
ಚಂಡಿಕಾರಮಣಂಗೆ ಕೂಡಲಸಂಗಮೇಶಂಗೆ ।
ಖಂಡಶಶಿಧರಕಲಿತಮೌಳಿಗೆ
ಖಂಡಪರಶುಗೆ ನಿಸಿತವಿಷವನ
ಖಂಡ ಭಕ್ತಿಯೊಳಲದರ್ು ಸಮರ್ಪಣಂಗೆಯಿ ॥ ೨೫ ॥

ದೇವ ನೀವಾರೋಗಿಸೆನುತ ಮ
ನೋವಿಕಾಸದೊಳಾಳ್ದು ನಿಜ ಗರಿ
ಮಾವಿಜೃಂಭಿತವೃತ್ತಿಯಲಿ ಕೊಪ್ಪರಿಗೆಗಳಿಗೆಯ್ದಿ ।
ತಾವೊಲಿದು ತಮತಮಗೆ ಭಕ್ತರು
ತೀವಿ ಪೊಂಗಳಸಂಗಳೊಳು ತತ್
ಸ್ರಾವೆಗಳೊಳುಂ ಪೊನ್ನ ತಂಬುಗೆಗಳೊಳು ಮೊಗೆಮೊಗೆದು ॥೨೬॥

ತಂದು ಗಡಣಿಸುತಳವಡಿಸುತಾ
ನಂದಿಸುತ ಲಿಂಗಾರ್ಪಿತಂಗಳ
ನೊಂದಿಸುತ ಕೈಕೊಳುತ ಕೊಳುತಂ ತತ್ಪ್ರಸಾದವನು ।
ಬಂದು ಕುಳ್ಳಿರಿ ಜಂಗಮಾವಳಿ
ಸಂದಣಿಸದಿರಿ ಉಗಿಸದಿರಿ ಮಾ
ನಂದದೇವಾ ಮೆಲ್ಲನಾರೋಗಿಸುತಹನೆ ಮತ್ತೆ ॥ ೨೭ ॥

ತಂದು ಗಡಣಿಸಲೀಂಟುತಂ ಗಣ
ವೃಂದವೆಯ್ತುಂದವರವರಿಗಾ
ನಂದಿಸುತ ಶಿವಗರ್ಪಿಸುತ್ತಂ ಶಿವ ಶಿವಾಯೆನುತ ।
ಮುಂದೆಸೆಯೊಳವಧಾನ ಚಿತ್ತದೊ
ಳೊಂದಿಯಾರೋಗಿಸುತ ಜುಜುಜು
ಜಿಂದು ಸುರಿವುತ ಘಜ್ಝಘಜ್ಝನೆ ತೇಗುತೊಲಿವುತ್ತ ॥ ೨೮ ॥

ಹೊಡವಡುತ ತರ್ಕೈಸುತಂ ಕೈ
ವಿಡಿದು ಕುಣಿವುತ ತಣಿವುತಂ ಬೊ
ಬ್ಬಿಡುತ ಹಾರುತ ಚಪ್ಪಳಿಕ್ಕುತ ಪಾಡುತಾಡುತ್ತ ।
ಮೃಡಗಣಾವಳಿ ಈ ಪ್ರಕಾರದೊ
ಳುಡುಗದತಿ ವಿಕ್ರಮವಿನೋದದೊ
ಳಡರ್ದು ಪಟುವಿಷಕೇಳಿಯಂ ಸಲಿಸುತ್ತಮಿರಲೊಡನೆ ॥ ೨೯ ॥

ಶರಣಮಣಿಗಣವಾರಿನಿಧಿ ಬಸ
ವರಸನಾ ಸಮಯದಲಿ ಚಂಡೇ
ಶ್ವರವರದನವಧರಿಸಿದಾ ಶೇಷಪ್ರಸಾದವನು ।
ಕರೆದು ಜನಪನನು ನೃಪನ ವಿ
ಸ್ತರ ಸಮಸ್ತನಿಯೋಗದವರನು
ಬರಿಸಿ ಕರಮಾದರಿಸಿ ಪಂತಿಗಳಾಗಿ ಕುಳ್ಳಿರಿಸಿ ॥ ೩೦ ॥

ಅರಸರಿಗೆ ತಂದೆಱೆದು ಮೊದಲಲಿ
ಅರಸಿಯರಿಗೆಱೆದಾ ವಿಳಾಸಿನಿ
ಯರಿಗೆಱೆದು ದಾದಿಯರಿಗೆಱೆದು ಕುಮಾರಕರ್ಗೆಱೆದು ।
ತರಿಸಿ ಸಾವಂತರಿಗೆಱೆದು ಶಿ
ಷ್ಟರಿಗೆಱೆದು ನಂಟರಿಗೆಱೆದು ಬಂ
ಟರಿಗೆಱೆದು ಹಡಪಿಗರಿಗೆಱೆದು ಪಸಾಯಿತರಿಗೆಱೆದು ॥ ೩೧ ॥

ಆ ಗರಳವಂ ಬಸವನಖಿಳ ನಿ
ಯೋಗಿಗಳಿಗೆಜಱಿಯಲ್ಕವರ್ಗಳ
ಭಾಗಕದು ಹಾಲ್ತುಪ್ಪವಾಗಿರೆ ಮತ್ತೆ ಭಂಡಾರಿ ।
ನಾಗಭೂಷಣನಂ ಹರನ ಪು
ನ್ನಾಗನಂ ತನ್ನಿ ಪ್ರಕಟದಿಂ
ನಾಗಮುದಹರನೆನಿಪ ನಾಗವರೇಣ್ಯನಂ ತನ್ನಿ ॥ ೩೨ ॥

ಬಸವರಸನಿಂತೊಂದನೊಂದಂ
ಪೆಸರುಗೊಳುತಿವು ಮೊದಲೆನಿಪ ಗಜ
ವಿಸರವಂ ಕ್ಷಣದೊಳು ತರಿಸಿ ಮತ್ತಂ ನಿರೂಪಿಸಿದ ।
ಕುಸುಮಶರನಂ ತನ್ನಿ ಹಯಸಾ
ಹಸದಿನಪನಂ ತನ್ನಿ ಸಮರೋ
ಲ್ಲಸನ ಹರಿಯಂ ತನ್ನಿ ತೇಜದ ತೇಜಿಯಂ ತನ್ನಿ ॥ ೩೩ ॥

ಒಂದನೊಂದಂ ವಿವರಿಸುತ ಪಲ
ವಂದದಿವು ಮೊದಲಾದ ಘೋಟಕ
ವೃಂದವಂ ಬಸವಯ್ಯನಾಕ್ಷಣಮಾತ್ರದೊಳು ತರಿಸಿ ।
ಹೆಂದದಾನೆಗಳಿಗೆ ಹಯಾಳಿಗೆ
ತಂದು ತಂದೆಜಱಿಯಲು ವಿಷಂ ಸಲೆ
ಸಂದು ಸವೆಯಲು ಚಂಡಿ ಕಬ್ಬಿಲಪಡೆ ನಡುಗುತಿರುಲು ॥ ೩೪ ॥

ಹರನ ಭಕ್ತರು ಮೆಚ್ಚಿ ಪೊಗಳಲು
ವರ ಗಣಾಂಘ್ರಿಗುಣಪ್ರಸಾದಾ
ಭರಿತ ರಸಘನವೃಷ್ಟಿ ಬಸವನ ಮೇಲೆ ಸುರಿಯಲ್ಕೆ ।
ನೆರೆದು ನಭದೊಳು ರುದ್ರರೀಕ್ಷಿಸು
ತಿರಲು ಸುರದುಂದುಭಿಗಳುಲಿಯಲು
ಅರಸನಚ್ಚರಿವಟ್ಟು ನಮಿಸಲು ನರರ ಜಯವಿಡಲು ॥ ೩೫ ॥

ಭಲರೆ ಭಲರೇ ಲೋಕಪಾವನ
ಭಲರೆ ನಂದೀಶಪ್ರಭಾವನ
ಕಲಿಮಲಾಪಹ ಭಾಪುರೇ ಭಾಪುಜ್ವಳಿತಕೀರ್ತಿ ।
ಅಲಘು ಧೀರೋದ್ಧಾರ ಭಾಪುರೆ
ಮಲಹರಪ್ರತಿಬಿಂಬಮೂರ್ತಿಯೆ
ಇಳೆಯೊಳೆಣಿಸಲು ತೋಜಲೊಳರೆ ಸರಿ ನಿನಗೆ ಬಸವ ॥ ೩೬ ॥

ಎನುತ ಲೋಕವದೆಯ್ದೆಯದುಭುತ
ಜನಿತಮಾನಸರಾಗಿ ಪೊಗಳಲು
ತನುಗಳೊಳು ಬೆದಬೆದನೆ ಕುದಿವುತ ಕಬ್ಬಿಲರ ಬಳಗ ।
ವಿನುತಿಸುತ ಸೈಗೆಡೆದೆಡೆಗೆಡೆಗೆ
ವಿನಮಿಸುತ ಬಸವಯ್ಯ ಅಭಯಾ
ಘನ ದಯಾಂಬುಧಿಯ ಭಯಮಭಯವಮಾತ್ಯ ಶೇಖರನೇ ॥ ೩೭॥

ಎಂದುವುಂ ನಿಮ್ಮಡಿಯ ಸರಿಯೇ
ತಂದೆ ತಮ್ಮಂ ಪರಿಭವಿಸುವುದಿ
ದೊಂದು ಶೌರ್ಯಮೆ ನಿಮಗೆ ಬಸವಪ್ರಭುವೆ ಚಿತ್ತೈಸು ।
ಮುಂದೆ ದುರ್ಜನಮಿತ್ರನಾಧುದ
ಱಿಂದ ಸಜ್ಜನರೊಡನೆ ಹಗೆ ಲೇ
ಸೆಂದುದಲ್ಲಾ ಇದು ನಿಮಿತ್ತಂ ಕಾಯ್ದು ಸಲಹೆಮ್ಮ ॥ ೩೮ ॥

ನೀವು ದಿಕ್ಕುಂ ದೆಸೆಯುಮವನಿಯೊ
ಳಾವನುಂಟೆನ್ನೆಮಗೆನುತ ನಾ
ನಾವಿಧದೊಳುಂ ಕೀರ್ತಿಸುವರಂ ನೋಡಿ ಕರುಣದಲಿ ।
ಓವಿ ಕಾಯ್ದನು ಶರಣುವೊಕ್ಕೊಡೆ
ತೀವಿದನು ಸ್ವಸಮಯದ ಮಹಿಮೆಯ
ನಾವೆಡೆಯೊಳುಂ ನೂಂಕಿದನು ವಾದಂಗಳೆಲ್ಲವನು ॥ ೩೯ ॥

ಈಶ್ವರನ ಪ್ರಸಾದ ವೀರವು
ಹೇಶಭಕ್ತರಿಗಲ್ಲದಿಳೆಯೊಳು
ಮೀಸಲಿದು ಮಿಕ್ಕಿನ ಸಮಯಿಗಳಿಗೆಂದುವುಂ ಎನುತ।
ಶಾಸನವ ಹೊಯಿಸಿದನು ಶಿವಭವ
ನಾ ಸಮಗ್ರದ ಮುಂದೆ ಶಿಲೆಯೊಳು
ದೇಶ ದೇಶಂ ಅಱಿಯೆ ಕಲ್ಯಾಣದೊಳಗಾ ಬಸವ ॥ ೪೦ ॥

## ೮. ಮಡಿಹಿಸಾ ದ್ರೋಹಿಯನು

ಪಾವನಾತ್ಮನು ಮತ್ತೆಯು ಜಗ
ದೇವಮಂತ್ರಿ ವಿರೋಧಿಮದವಿ
ದ್ರಾವಣಂ ರುದ್ರಾವತಾರನು ವೀರಶೃಂಗಾರ ।
ಶೈವಸಮಯಸಮುದ್ಧರಣ ವಿ
ದ್ಯಾವಿಶಾರದನತಿ ವಿಭವದಿಂ
ಜೀವಿಸುತ ಶುಭಕಾರ್ಯಮಂ ಮಾಡುತ್ತಲೊಂದುದಿನ ॥ ೧ ॥

ಬಂದು ಬಸವಾಮಾತ್ಯ ಭಕ್ತಾ
ನಂದಸಿಂಧುಶಶಾಂಕ ಸತ್ಪ್ರಿಯ
ದಿಂದೆ ತಂದ ವಿಭೂತಿಯಂ ಕೈಕೊಂಡು ನೀವೆನ್ನ ।
ಮಂದಿರದೊಳಾರೋಗಿಸಿದಡಾ
ನಿಂದು ಬದುಕುವೆನೆಂದಡೆಳೆನಗೆ
ಸಂಧಿಸಲು ಭಂಡಾರಿ ಜಗದೇವಣ್ಣನಂ ನೋಡಿ ॥ ೨ ॥

ಲಿಂಗಜಂಗಮ ಮಂಡಳಿಯ ಬರ
ವಿಂಗೆ ಸೈರಿಸಲಾಪೆಯಾದೊಡ
ಹಂಗೆ ಮಾಡಿಸು ಹೋಗೆನಲು ಭರದಿಂದ ಮನೆಗೆಯ್ದಿ ।
ಸಾಂಗಮಾಗಲು ವಿವಿಧ ಪಕ್ವಾ
ನ್ನಂಗಳಂ ಬಹು ವಿಧಪದಪದಾ
ರ್ಥಂಗಳಂ ಮಿಗೆ ರಚಿಸಿಯಾ ಜಗದೇವಯ್ಯನೈಸಜಲಿ ॥ ೩ ॥

ಕರವೆಸೆದು ಬಸವರಸನಿಂತವ
ಸರಿಸಿ ಬಾರದ ಮುನ್ನ ತಾನಾ
ಚರಿಸಿದಪೆ ನಿಯಮಾಮಾಘ್ಯದೈಕವನೆನುತ ಸಂಭ್ರಮಿಸಿ ।
ಸರಸರನೆ ನೆಲನಲ್ಲಿ ಸಗಣವ
ತರಿಸಿ ಮಂಡಲವಾಗಿ ಸಾರಿಸಿ
ಪರಮ ಭಕ್ತಿಯನುಳಿದು ಪಾರ್ಬರ ಕಾಲ್ಗಳಂ ತೊಳೆಯೆ ॥ ೪ ॥

ಪರಿಚರರ ಕೈಯಲಿ ಬಸವನೀ
ಪರಿಯನಱಿದಾಗ್ರಹಿಸಿ ಕಟ್ಟಾ
ಸುರದೊಳಲ್ಲಿಗೆ ಹೋಗಲೊಲ್ಲದೆ ತಾನಿರುತ್ತಿರಲು ।
ಭರದೊಳಿತ್ತಲು ಮತ್ತೆ ಜಗದೇ
ವರಸನೆಯ್ತರೆ ಮುಂದೆ ಕಾಣುತ
ತೆರೆಯನಿಕ್ಕಿಸಿ ಕೋಪವಹ್ನಿಯ ಕಿಡಿಯನುಗುಳುತ್ತ ॥ ೫ ॥

ಮಲಹರನ ಮಜ್ಜನಕೆಱೆವ ಕೈ
ಗಳಿನಿತರ ಭೂಸುರರಡಿಗಳಂ
ತೊಳೆಯಲಹುದೇ ಶಿವಪದಾಂಬುವನುತ್ತಮಾಂಗದಲಿ ।
ತಳೆದು ಭವಿಗಳ ಕಾಲ ನೀರಂ
ತಳಿದುಕೊಳುವರೆ ಪಾರ್ವತೀಶನ
ನೊಲಿದು ಪೂಜಿಸುತನ್ಯವಿಪ್ರರನರ್ಚಿಸಲುಬಹುದೇ ॥ ೬ ॥

ಚಿತ್ರಜಾರಿಗೆ ನೆಗೆವ ಕೈಗಳ
ನೆತ್ತುವರೆ ಸೇಣಿನ ಹೊಲೆಯರಿಗೆ
ಉತ್ತಮದ ಲಿಂಗಪ್ರಸಾದಿಗೆ ಭಕ್ತಿವಿಮುಖರಹ ।
ಮತ್ತೆ ಕರ್ಮಶ್ವಪಚರೊಡನೊಲ
ವೆತ್ತಿಯುಂಡಡೆ ಪಾಪವಂ ನೆಱೆ
ಹೊತ್ತನುಭವಿಸುವಂದವಲ್ಲಾ ಕೇಳದೆಂತೆನಲು ॥ ೭ ॥

ಶ್ವಾನನಜೀವುದೆ ನಾಕಲೋಕವ
ನೇನಬಲ್ಲದು ಭೇಕವಂಬುನಿ
ಧಾನದಾಳವನರಿವುದೇ ನೊಣ ಮಧುಕುಸುಮರಸವ ।
ಭಾನುವಂ ಕೌಶಿಕವು ಕಾಬುದೆ
ಜ್ಞಾನಹೀನರಿಗಸಮಲಿಂಗ
ಧ್ಯಾನ ಭಕ್ತಿವಿಧಾನ ಬೋಧೆಯದೆಂತಹುದು ಹೇಳ ॥ ೮ ॥

ಹಟ್ಟಿಯೊಳು ಸುರಧೇನು ಬಂದಳ
ವಟ್ಟಿರಲು ಗೊಡ್ಡಂ ಪಿಡಿದು ಮತಿ
ಗೆಟ್ಟು ಕಱಿದಪೆನೆಂಬವನವೊಲು ಪಿರಿದು ತವರಾಜ ।
ಕಟ್ಟದಿರೊಳಾಗಳುಮಿರಲದಂ
ಬಿಟ್ಟು ತೌಡಂ ಮುಕ್ಕುವನವೊಲು
ಘಟ್ಟವಜ್ರವಿರಲ್ಕೆ ಸುರಗಿಯನರ್ಥಿಸಿದನವೊಲು ॥ ೯ ॥

ಪಾರಿಜಾತಂ ನೆರೆಯೊಳಿರುತಿರೆ
ಭೂರುಹಂಗಳ ನೆಳಲನರ್ಥಿಸಿ
ಸಾರಿದನವೊಲು ಹೆದ್ದೊಱೆಯನುಱೆ ತಡಿಗೆ ದಾಂಟಿಸುವ ।
ತೋರವಹ ಬಲುದೆಪ್ಪವಿರೆ ಮನ
ಹಾರಿ ಸೊರೆಯೋಡಂ ಪಿಡಿದು ತಾಂ
ಪಾರವೆಯ್ದುವೆನೆಂಬವನವೊಲು ಕೇಳು ಜಗದೇವಾ ॥ ೧೦ ॥

ಎಂದು ನಾನಾ ಛಂದದಿಂದಿಂ
ತೆಂದು ಬೆಸಸುತಿರಲ್ಕೆ ಕೇಳುತ
ಮಂದ ಶೋಕಜಲಾನ್ವಿತಾಂಬರಯುಗದಿ ಜಗದೇವ ।
ಮುಂದೆಸೆಯೊಳಷ್ಟಾಂಗವೊಂದಲು
ವಂದಿಸುತ್ತಾ ಶಿವಮಹಾಗಣ
ವೃಂದಕಭಿಮುಖನಾಗಿ ತನ್ನ ಕರಂಗಳಂ ಮುಗಿದು ॥ ೧೧ ॥

ಎನ್ನನೇನಂ ಮಾಡಿಕೊಂಬೆನೊ
ಎನ್ನ ದೋಷಕ್ಕಾವುದೋ ವಿಧಿ
ಎನ್ನ ಭಕ್ತಿವಿಹೀನತೆಗೆ ಪರಿಹಾರವೆಂತಹುದೋ ।
ಪನ್ನಗೇಂದ್ರಾಹುತಿಗೆ ಬೀಳ್ವೆನೊ
ಛಿನ್ನಭಿನ್ನಂ ಕಡಿದುಕೊಂಬೆನೊ
ಎನುತ ಒಡಲಂ ಲಿಂಗಪೂಜಾನಿಷ್ಠೆಯಿಲ್ಲದಕೆ ॥ ೧೨ ॥

ಎನುತ ಬಿನ್ನೈಸುತ್ತ ನಮಿಸುತೆ
ವಿನಯಭಾವದೊಳಿಪ್ಪ ಜಗದೇ
ವನೊಲವು ಮಿಗೆ ನೋಡಿ ಬಸವನು ಶಿವಗಣಾವಳಿಯ ।
ಅನುಮತದೊಳಿಂತೆಂದನಾತಂ
ಗಿನಿತು ಹೆದಱದಿರಿನ್ನು ಕೆಲಕೆಲ
ದಿನಕತಿ ಶಿವದ್ರೋಹವುದಯಿಸಲಾದುದಂತಾಗಿ ॥ ೧೩ ॥

ಮಡಿಹಿಸಾ ದ್ರೋಹಿಯ ನಮಗೊಡಂ
ಬಡಿಕೆಯಾಯಿತು ನಿನ್ನ ಕೆಲಸಕೆ
ಮೃಡನೊಲಿದು ತಾ ಮೆಚ್ಚುವನು ನಿಜ ನಿರ್ಣಯಕ್ಕಿಂತು ।
ಪಡೆವೆ ಭಕ್ತರ ಕರುಣವಂ ನಿನ
ಗೊಡೆಯರುಗಳಂ ಕೂರ್ತು ಕೊಟ್ಟರು
ಬಡಿದು ಹಾಲಂ ಕುಡಿಸಬಂದರು ತಂದೆಗಳು ನಿನ್ನ ॥ ೧೪ ॥

ಮೂಱುಸೂಳಿಗೆ ನಂಬು ನೆಲೆ ನಿನ
ಗೇಱಿಸಿದರೀ ಬಿರಿದ ನೀನೇಳ್
ಜಾಱದಿರು ನೀನೆನಲು ಮುಕುಳಿತಹಸ್ತಾವಳಿಕದಲಿ ।
ಊಱಿ ನಮಿಸುತ ಪುಳಕತತಿ ತಲೆ
ದೋಱೆ ಕೈಯಂ ನೀಡಿ ಬೆಸನ
ಕ್ಕಾಱೆನೆನ್ನದೆ ವೀರದಂಬುಲವಂ ಕೊಳುತಲಾಗ ॥ ೧೫ ॥

ವಿನಯನಿಧಿ ಜಗದೇವಶರಣನ
ಮನೆಗೆ ಬಸವಂ ಭಕ್ತಲೋಕದೊ
ಡನೆ ಸಹಾಯಿಗಳಾಗೆ ನಡೆತಂದಾತನುಂ ಮಾಳ್ಪ ।
ಅನುನಯೋಚಿತ ಸತ್ಕ್ರಿಯೆಗಳಿಗೆ
ಮನದಣಿದಖಿಳ ಭಕ್ತರುಂತಾ
ನನವರತಮುಂ ಸುಖದೊಳಿರ್ದನು ಭಕ್ತಿಭಂಡಾರಿ ॥ ೧೬ ॥

ಮತ್ತೆಯುಂ ಕಲ್ಯಾಣಕಟಕದೊ
ಳುತ್ತಮಾಚಾರವ್ರತನಿಯಮ
ಚಿತ್ತರರು ಹರಳಯ್ಯಮಧುವಯ್ಯಗಳು ಶಿವತತ್ವ
ವೇತ್ತರುಂ ಹೋಹರರು ಮಾನುಷ
ಕೃತ್ತಿಪರಿವೃತ ರುದ್ರರಪಗತ
ವಿತ್ತ ಮುಖ್ಯೇಷಣ ವಿವರಣದ ಕರ್ಮಸಂಚಯರು ॥ ೧೭ ॥

ಲಿಂಗನಿಷ್ಠಾಮಾನಸರು ಗುರು
ಲಿಂಗಸೇವಾತತ್ಪರರು ಚರ
ಲಿಂಗ ನಿತ್ಯಾರಾಧಕರು ತ್ರಿವಿಧಪ್ರಸಾದಿಗಳು ।
ಹಿಂಗದಾ ಕಲ್ಯಾಣವಲ್ಲಿಯೆ
ಮಂಗಳೋತ್ಸುಕ ಭಕ್ತಗೋಷ್ಠಿಸು
ಸಂಗತಿಯೊಳಾ ಬಸವನುಂ ತಾವುಂ ಪ್ರವರ್ತಿಸಲು ॥ ೧೮ ॥

ಕೆಲವು ಕಾಲಕ್ಕೈಸಜಲಿ ಬಿ
ಜ್ಜಳನೃಪಾಲಂ ತನಗೆ ಕಾಲನ
ಪೊಳಲಿಗೆಯ್ದಲು ಬಗೆದು ಬಸವನ ಬಹಳ ಮಹಿಮೆಯನು ।
ಛಲದ ಭಕ್ತಿಮಹತ್ವದೊಂದ
ಗ್ಗಳಿಕೆಯಂ ತಾನಜಿದುಮಜಿಯದ
ವೊಲು ನೆರೆಯಲಜ್ಞಾನಮದದಿಂ ಕಾಣದತಿ ಮದಿಸಿ ॥ ೧೯ ॥

ಸೊಗಸದಪದಿರ ಮಾತಿಗ್ಹಳ್ಳ
ಯ್ಯಗಳ ಮಧುವಯ್ಯಗಳನಾಗಳೆ
ಜಗತಿಪಂ ತಪ್ಪೇನುಮಿಲ್ಲದೆ ನೀತಿಯಲ್ಲೆಂದು ।
ಬಗೆಯುದವರಂ ಕರೆಸಿ ಕಣ್ಣಂ
ತೆಗೆಸಿದನು ಮಾಹೇಶ್ವರರ ಮುಹಿ
ಮೆಗಳನುದ್ದಂಡತೆಗಳಂ ತಾನಱಿಯನೇ ಮುನ್ನಾ ॥ ೨೦ ॥

ಲೋಕಪಾಲಂ ಕೇಡ ಬಗೆದನೆ
ಈ ಕಟಕವಿನ್ನಳಿದುದಕಟ ಪಿ
ನಾಕಿಭಕ್ತರು ಮುನಿದೊಡಂ ಬದುಕುವನೆ ತಾನೆನುತ ।
ವ್ಯಾಕುಲಿತಯುತ ಹೃದಯರಾಗುತ
ನೇಕರುಂ ಗುಜುಗುಜಿಸುತಿರಲು
ದ್ರೇಕಿಸುತ ಬಸವಂ ಸಹಿತ ಹರಭಕ್ತಸಂದೋಹ ॥ ೨೧ ॥

ಅಸಮಕೋಪೋದ್ದೀಪಿತಾಂಗೋ
ಲ್ಲಸನರಾಗುತ ಕೂಡಿ ವಿಕ್ರಮ
ವೆಸೆಯೆ ಹಳ್ಳಯ್ಯನ ಮಧುವಯ್ಯನ ಕಂಗಳಂ ಪಡೆದು ।
ಬೆಸನವಾಯಿತು ಶಿವನೊಳುಂ ತಾವ
ರ್ಜಿಸಿದೆವಿನ್ನೀ ಊರನೆನುತಂ
ಬಸವನುಂ ಭಕ್ತಾಳಿಯುಂ ಜಗದೇವನಂ ಕರೆದು ॥ ೨೨ ॥

ಸಿನ್ನ ಮುನ್ನಿನ ಭಾಷೆಯಂ ಸಲಿ
ಸಿನ್ನು ತದ್ದ್ರೋಹಿಯನಪಹರಿಸಿ
ನನ್ನಿಯಂ ಮೆಱೆ ಎನುತ ಜಗದೇವಂಗೆ ಬೆಸನಿತ್ತು ।
ತನ್ನರೇಂದ್ರನ ನೊಸಲ ಬರಹವ
ಮುನ್ನೊರಸಿ ಬಿಜ್ಜಳನ ಸಾಮ್ರಾ
ಜ್ಯೋನ್ನತಿಯನೀಶನ ಕವಳಿಗೆಯೊಳಂತು ತೊಡೆಯಿಸುತ ॥ ೨೩ ॥

ಇಲ್ಲಿ ಇವರವರೆನ್ನದೇ ನೀ
ವೆಲ್ಲರುಂ ಕೇಳೀಕ್ಷಣದೊಳೀ
ಬಲ್ಲಹನ ಸಾಮ್ರಾಜ್ಯಮುಂ ಕಲ್ಯಾಣಪಟ್ಟಣವು ।
ಎಲ್ಲವುಂ ಹಾಳಹುದು ದಿಟವನೆ
ಸೊಲ್ಲಿದೆವು ನಾವೆನುತ ಶಪಿಸುತ,
ಬಲ್ಲಿದ[ರೆನಿಪ್ಪಾ ಕಟಕದೊಳಗಿರುತಮಿಹ ಸರ್ವ] ॥ ೨೪ ॥

ಲಿಂಗವಂತರು ತಂಡತಂಡದ
ಜಂಗಮಾವಳಿ ತಮ್ಮೊಡನೆ ಬರೆ
ಸಂಗಮೇಶ್ವರಪುರಕೆ ಬಸವಂ ನಡೆವುತಿರಲಾಗಿ ।
ಇಂಗಿತಾ ಬಿಜ್ಜಳನ ಸಂಪತ್
ಸಂಗತಾಂಬುಧಿಯಕಟ ಶಿವನ ಗ
ಣಂಗಳೆಲ್ಲರು ಹೋಗೆ ಕಟಕದ ಭಾಗ್ಯವಳಿಯಿತ್ತು ॥ ೨೫ ॥

ಧರಣಿ ಕಂಪಿತವಾಯ್ತು ಕಾಗೆಗ
ಳಿರುಳುಡುಗದಱಚಿದವು ಹಗಲುಂ
ನರಿಗಳೂಳಿದವುಳ್ಕು ಬಿದ್ದವು ಕಲ್ಲಮಳೆ ಮೇಲೆ ।
ಸುರಿಯಿತಾದಿತ್ಯೇಂದುಗಳನಾ
ವರಿಸಿತಾ ಪರಿವೇಶವತಿ ನಿ
ರ್ಭರದೊಳನಿಲಂ ಬೀಸಿದನು ಕೆಂಧೂಳಿ ನೆಗೆಯಿತ್ತು ॥ ೨೬ ॥

ಹಗಲು ಮುಸುಗಿತು ಮಂಜುಗತ್ತಲೆ
ಗಗನದೊಳು ಭೀಕರ ಕೃತಾಂತನು
ವಿಗಡರೂಪಂ ತೋಱಿದನು ಪಟ್ಟಣ ಸಮೀಪದಲಿ ।
ಜಗತಿಯೊಡೆಯನು ಶಿರಸುವಿಲ್ಲದ
ಬಿಗಿದ ಹೆಣನಂ ಕಂಡನುದಯಾ
ದ್ರಿಗೆ ತರಣಿ ಬಹ ಸಮಯದಲಿ ಪ್ರತಿಯಿಸನುದಯಿಸಿದನು ॥೨೭॥

ಇದಱ ಮೇಲೇನಾಗಲಾಗಿ
ದುರ್ಗದೊ ಎನುತ ಸಂತಾಪಿಸುತ್ತಂ
ಹೆದಱುತಿರೆ ಜನವಿತ್ತಲಾ ಜಗದೇವನುಂ ತನ್ನ।
ಸದನಕ್ಕೈತರೆ ತಜ್ಜನನಿ ಕಂ
ಡೊದಱುತಾತನ ಮುಸುಡನೀಕ್ಷಿಸು
ತಿದು ಸದಾಚಾರ್ಯೈಕ ಭಕ್ತಿಗೆ ಪಥವೆ ಕೇಳ್ಮಗನೆ ॥ ೨೮ ॥

ಶಿವಗಣದ್ರೋಹದ ವಚನವದು
ಕಿವಿಗೆ ಸಿಲುಕಿದ ಮಾತ್ರದಲಿ ಹಗೆ
ಯವನನವಿಚಾರದೊಳಿಱಿಸಲ್ ಬೇಹುದಾಱದಡೆ।
ಸವೆವುದೈ ತಾನಾದೊಡನುಮಾ
ನವನುಳಿದು ಶಿವಭಕ್ತನಿಕರವು
ಸವೆಸಲ್ಕಿದಕೋಸರಿಸಿದಾ ಚಂಡಿಯಾದಡೆಯು ॥ ೨೯ ॥

ಸಾಯಲಾಱದೆ ಜೀವವಂಚಕ
ಕಾಯಧಾರಿಗೆ ಕೋಪಿಗಜ್ಞಾ
ನಾಯತಂಗುಪಜೀವಕಂಗತಿ ಕುಟಿಲನಾದಂಗೆ।
ಶ್ರೀಯುಮಾರ್ಧಶರೀರಿ ಮಾಯಿಕ
ಮಾಯಿಕಂ ಮೆಚ್ಚುವನೆ ಭಕ್ತಿವಿ
ಧೇಯನಪ್ಪನೆ ಕೂರ್ಪನೇ ಪಲವಾಡಲೇಕಿನ್ನು ॥ ೩೦ ॥

ರಾಗದಿಂ ಕೃತವೆಂದು ಜೀವ
ತ್ಯಾಗಕೋವಿದ ಸರಸಮುಚಿತೋ
ದ್ಯೋಗವಂ ನಿನಗಿತ್ತು ಹೋದರದಲ್ಲದೇ ಖಳನ।
ಆಗಳೇಂ ಕೊಲಲಂಜಿ ತೊಲಗಿದ
ರೇ ಗಣಂಗಳು ಕೇಳವರೊಳಂ
ತಾಗಿ ಪೊರ್ಬನು ಮುನಿದೊಡಂ ಲೋಕಪ್ರಳಯವಹುದು ॥ ೩೧ ॥

ಅಂದು ದಕ್ಷನದಕ್ಷನೆನಿಸಿ ಅ
ಮಂದ ಗರ್ವಿತನಾಗಿ ಹರನಂ
ನಿಂದಿಸಲು ಪತಿನಿಂದೆಯಂ ಕೇಳದೆ ಶಿವಶಿವಾ ಎನುತ ॥
ಸೌಂದರಾಂಗಿ ಭವಾನಿ ಕಲುಷಿತ
ದಿಂದೊಗೆದು ನೆಗೆದುರಿವುರಿಗೆ ಭರ
ದಿಂದ ಆಹುತಿಗೊಟ್ಟಳಲ್ಲಾ ತನ್ನ ದೇಹವನು ॥ ೩೨ ॥

ರೂಪಿಸುವ ತನ್ನೀಶನಿಂದಾ
ಲಾಪಮಂ ಕೇಳದೆ ಮನದೊಳತಿ
ಕೋಪದಿಂದುಪಮನ್ಯುವಾಗಳೆ ಭಸ್ಮವಾದನಲಾ ।
ಗೋಪವಾಹನ ಭಕ್ತಹಿಂಸೆಯ
ನೀ ಪರಿಯೊಳೆಲೋ ಕೇಳುತಿರ್ದುಂ
ಪಾಪವೆನ್ನದೆ ಸುಮ್ಮನಿಹುದಿದು ನೀತಿಯೇ ನಿನಗೆ ॥ ೩೩ ॥

ಹಿಂದೆ ಭಕ್ತದ್ರೋಹಿಯರ ನೀ
ಕೊಂದು ಬಂದ್ಯೆ ಇತ್ತಲೂಟಕೆ
ಬಂದೆ ಈ ಹುಲು ಊಟವಿನ್ನೆಹಗಿಂಪಹುದು ಕೇಳಾ ।
ನಿಂದಿರಾ ಛೀ ಕುನ್ನಿ ಕೈ ಕೈ
ಯಿಂದೆ ಶಿವಲಿಂಗಪ್ರಸಾದವ
ನಿಂದು ನಾಚಿಕೆಯಿಲ್ಲದಡೆ ನಾಯ್ಗ್ಯೆದುಡುಕು ಬಂದು ॥ ೩೪ ॥

ಎನುತ ವಿಂತುಚ್ಚುಚ್ಚಿರೇಯೆಂ
ದೆನುತ ಚಿಟುಕಿಕ್ಕುತವೆ ತನ್ನರ
ಮನೆಯ ಹಿತ್ತಿಲಬಾಗಿಲಲಿ ಲಿಂಗಪ್ರಸಾದವನು ।
ಜನನಿ ತಂದವನಿಂಬಲಿ ಸುರಿಯಲು
ಶುನಕನಂದದೊಳುಚಿತವಹುದಹು
ದೆನುತ ಜಗದೇವಂ ಪ್ರಸಾದವನುಂಬ ಸಮಯದಲಿ ॥ ೩೫ ॥

ಲಿಂಗವಂತರು ವೊಲ್ಲಬೊಮ್ಮ
ಯ್ಯಂಗಳೆನಲತಿ ವೀರಭಕ್ತಿ ಸು
ರಂಗದಿಂ ವರ್ತಿಸುತಿಳೆಯೊಳೀ ವಾರ್ತೆಯಂ ಕೇಳ್ದು ।
ಹಿಂಗದಾ ಜಗದೇವನೆಡೆಗೆ ಕ
ಡಂಗಿ ಬಂದೊಂದಾಗಿ ತಾವು
ತುಂಗ ವಿಕ್ರಮರಾ ಪ್ರಸಾದವನಾಗಳನುಭವಿಸಿ ॥ ೩೬ ॥

ದೇವವಸ್ತ್ರಮನುಟ್ಟು ಭಸ್ಮಾಂ
ಗಾ ವಿಭೂಷಣರಾಂಕಿತಾ ವೀ
ರಾವತಾರರು ವೀರಭದ್ರಾದಿ ಪ್ರಮಥವರರ ।
ಭಾವದಲಿ ನೆನೆದುಗ್ರಕೈದುಗ
ಳೋವಿ ಮೂವರು ತಮತಮಗೆ ಪರಿ
ದಾ ವನಿತೆಗೊಲಿದೆಜಗಿ ಹರಕೆಯ ಸೇಸೆಗಳ ಧರಿಸಿ ॥ ೩೭ ॥

ಬರಬರಲು ಸಂದಣಿಪ ನಾನಾ
ಕರಿ ಘಟಾವಳಿ ಮಾವತಿಗರುಂ
ತುರುಗಚಯದೇಜಾಟದಾ ರಾಹುತರಸಂದೋಹ ।
ನೆರೆದು ಬರುತಿಪ್ಪವರ್ಗಳೆಲ್ಲಂ
ತರಿಸಿ ದಾರಿಯನೀಯೆ ಧೀರರು
ಉರವಣಿಸಿ ವೀರಾವತಾರರು ಮೂವರೆಯ್ತರಲು ॥ ೩೮ ॥

ದ್ವಾರದ್ವಾರಂಗಳೊಳಗಲದಿಹ
ಪಾರಕರ ಬಗೆಗೊಳ್ಳದಂತ
ರ್ದ್ವಾರದಾ ಸಾವಾಸಿಗಳ ಮೀಜುತ್ತ ನಡೆತರಲು ।
ಭಾರತ ನಿಯೋಗಾಳಿ ಜನಪದ
ಪಾರ ವಿಭವಗಳಿಂದ ಪಾರಾ
ವಾರ ಗಂಭೀರಗಳೆಸೆವ ನೃಪಸಭೆ ಮೆಜೆವುತಿರಲು ॥ ೩೯ ॥

ಆ ಇರುಳಿನೋಲಗಕೆ ಗಮನಿಸಿ
ರಾಯನಂ ಕಾಣುತ್ತವೈಸಱೊ
ಳಾಯುಧಂಗಳನುರ್ಚಿ ಸಭೆ ಝುಲ್ಲೆನಲು ಬಿಜ್ಜಳನ ।
ಕಾಯದಲಿ ಒಂದೆರಡು ಮೂರ್ಪ್ರೂ
ರಾಯ ಘಾಯದೊಳಿಱಿದು ಕೆಡಹಿಯ
ಜೇಯರಸಮರು ಮೂವರುಗ್ರೋದಗ್ರ ವೃತ್ತಿಯಲಿ ॥ ೪೦ ॥

ಅತ್ತಲರಮನೆಯಿಂದ ಪೊಱಮ
ಟ್ಟತ್ತ ತನ್ನರಮನೆಗೆ ವೀರಂ
ಬೆತ್ತಿ ವೊಲ್ಲೆಯ ಬೊಮ್ಮಯಂಗಳು ತಾನುವೆಯಿತಂದು ।
ಹೆತ್ತ ತಾಯಿಗೆ ವಂದಿಸುತ ನಾಂ
ಪೊತ್ತ ಹಿಂದಣ ಕೆಲಸವಿಂದಾ
ಯಿತ್ತೆ ಎಂದುತ್ತಮೆಯ ಕೃಪೆಯಂ ಪಡೆದು ಜಗದೇವ ॥ ೪೧ ॥

ಇಹಪರೇತರ ವರನರಕ ವಿ
ಗ್ರಹನನೀಶ್ವರಭಕ್ತಜನ ನಿ
ಗ್ರಹನನಪ ಹರಿಸಿದೊಡನಿತಱೊಳೆ ಹೋಗದಾ ಖಳನ ।
ಅಹಗೆ ಕೊಲ್ಲದೆ ಬಂದ ತಪ್ಪಿಗೆ
ವಿಹಿತವಿನ್ನೊಂದುಂಟು ದಂಡನೆ
ಯಿಹಗೆನುತ್ತವೆ ತನ್ನ ಶಿರವಂ ತಱಿದುಕೊಳಲೊಡನೆ ॥ ೪೨ ॥

ಗೋತ್ರಪುತ್ರೀನೇತ್ರದಶಶತ
ಪತ್ರಮಿತ್ರಂ ಮೆಚ್ಚಿಯಾತನ
ಪುತ್ರಪೌತ್ರ ಕಳತ್ರಮಿತ್ರಪುಮುಖಗೋತ್ರರನು ।
ಚಿತ್ರಮೆನೆ ಮಣಿಮಯ ಸುವರ್ಣ ಪ
ವಿತ್ರಿತ ವಿಮಾನನಂಗಳಲಿ ನಿಜ
ಗೋತ್ರದಲ್ಲಿಂಗೊಯ್ದನಾ ಪುರಜನರು ನೋಡಲ್ಕೆ ॥ ೪೩ ॥

## ೯. ಬೆರಸಿದನು ಶಿವಲಿಂಗತತ್ವದೊಳು

ದೇವ ಶರಣಮನೋನಿವೇಶನ
ದೇವ ಮದ್ಭವಪಾಶನಾಶನ
ದೇವ ಸದ್ಗುರುದೇವ ಮತ್ಕುಲದೈವ ಮಜ್ಜೀವ ।
ದೇವ ಸಂಗಮದೇವ ಮದ್ವರ
ದೇವ ನಿಜಭಕ್ತಪ್ರಸಾದವ
ನಾವಗಂ ಬಿಡದುಂಡು ಬಾಳ್ದಿಂತಾದೆನಂತಾಗಿ ॥ ೧ ॥

ಭವಭವಂಗಳೊಳವರ ಕಿಂಕರ
ರವರ ಕಿಂಕರನಾಗತಕ್ಕವ
ನವರ ಋಣದಲಿ ಹೋದುದುಂಟೆಂತಲ್ಲದೇ ನಿನ್ನ ।
ಅವಸರಿಸಿ ನಾ ಬೇಡಿದಡೆ ಇನಿ
ತುವನೆನಗೆ ಕೊಟ್ಟಡೆಯು ತಪ್ಪಿನ
ನೆವದಿ ಸೈರಿಸಿ ಕಾಯ್ದಡೆಯು ನೀವುಳ್ಳೊಡಂ ಹೇಳಿ ॥ ೨ ॥

ಹಿಂದೆ ನಿನ್ನೊಳು ಪುಟ್ಟಿದುದು ಮೊದ
ಲಿಂದುತನಕೊಂದಡಕೆ ಹಂಗಿನೊ
ಳೊಂದೆನುಸಿಕನೆ ನಿನ್ನ ನಾನೋಲೈಸಿದೆನು ಹೊದ್ದಿ ।
ಕುಂದದಲಸದೆ ಬಿಟ್ಟಗೆಲಸಕೆ
ಸಂದು ಮಾಡುತ್ತಿರ್ದಡದು ನಿನ
ಗಂದವಲ್ಲಾ ದೇವ ಸಾವಿರ ವರುಷವಾದಡೆಯು ॥ ೩ ॥

ಇಂತು ಮೌನದೊಳಿಹುದುಚಿತವೆ ಪು
ರಂತರಾಣೆನ್ನಾಣೆ ಅಸ್ಮತ್
ಕಾಂತ ವೃಷಭಾರೂಢ ನಾ ಬಿನ್ನೈಸುತಿರಲಾಗಿ ।
ಮುಂತೆ ಕೇಳದೆ ನಿನ್ನ ವೃಷಭನ
ನೆಂತು ಬಿಡಬಹುದೊಲ್ಲೆನೊಂದನು
ಸಂತಸದೊಳಿದು ಸೋಲವಲ್ಲೆನಗೀವ್ರತವನಿತ್ತು ॥ ೪ ॥

ಅತುಳಿತಾನಂದಿತ ಪರವಶೀ
ಯುತ ಮಹಿಮ ತತ್ವಸ್ಫುರಣಗತಿ
ಮತಿ ಸಕಾಯ ಸಕರ್ಮ ಚೈತನ್ಯಸ್ಥರತಿವಿತತಿ ।
ಸತತಮುಂ ನಿಮ್ಮಲ್ಲಿರಲು ಸ
ಮ್ಮತಿಸಿ ಕರುಣಿಸು ನಿಮ್ಮಯಾಜ್ಞೆಯ
ಗತಿವಿಡಿದು ಬಂದುಳ್ಳ ಕೆಲಸವನೆಯ್ದೆ ಮಾಡಿದೆನು ॥ ೫ ॥

ಎನಲು ತದ್ಗುರುಮೂರ್ತಿ ಕರುಣಾ
ನನವನೇಜಮನಲರಿಸುತ ಮು
ನ್ನಿನ ಪರಿಯನುಳಿದಾಕ್ಷಣದೊಳಾ ದೇಗುಲದೊಳಿರ್ದು ।
ಮನವೊಸೆದು ಪೂಜಮಡಲು ಕಾಣುತ
ವಿನುತಿಸುತವಾ ಬಸವನಾ ಗುರು
ವಿನ ಚರಣಸರಸಿಜಯುಗಕೆ ಹಣೆಯೊಂದೆ ವಂದಿಸುತ ॥ ೬ ॥

ಭರಿತ ಸರಸಾನಂದಲೋಚನ
ಶರಧಿ ಮೇಲ್ಪರಿದೊತ್ತಿ ಪಸರಿಸೆ
ನಿರತ ಗದ್ಗದ ಕಂಠಮೆಸೆಯಲುಮುತ್ಪುಳಕರಾಜಿ ।
ನೆರೆದು ಪರ್ಬಲು ತನುವಿನೊಳು ತ
ತ್ಪರ ಹೃದಯನಾಗಿರ್ದ ಮಗಸಂ
ಕರಮೊಸೆದು ಕರದಿಂ ನೆಗಹಿ ತನ್ನ ಪ್ರಸಾದವನು ॥ ೭ ॥

ಕೊಡುತ ಮೆಯ್ದುಡವುತ್ತ ಕರಗುತ
ಒಡನೊಡನೆ ಬಿಗಿದಪ್ಪಿಕೊಳುತಂ
ಬಿಡದೆ ತನ್ನೊಳಗೊಳಗು ಮಾಡಿಕೊಳುತ್ತ ಗುರುಮೂರ್ತಿ ।
ಗುಡಿಯೊಳಾಗಳೆ ಪೊಕ್ಕನಿಬ್ಬರ
ಬೆಡಗದೆಂತುಟೊ ಕಾಣಬಾರದು
ಕಡುವಿಚಿತ್ರಮಿದೆಂದು ಸರ್ವರು ನೋಡಿ ಬೆಜಗಾಗೆ ॥ ೮ ॥

ಬಸವನಾ ಗುರುಗರ್ಭವಾಸವ
ನೊಸೆದು ಪೊಕ್ಕಿರೆ ಸಂಗಮೇಶ್ವರ
ನಸಮ ಸದ್ಗುರುವಿನ ತೇಜದೊಳೆಯಿತಂದು ತನ್ನೊಳಗೆ ।
ಬಸವನಂ ಸಂಧಿಸಿಕೊಳಲು ತದ
ವಸರದೊಳು ಜಂಗಮವಿತತಿ ರಂ
ಜಿಸಲು ಭೋರನೆ ಲಿಂಗತೂರ್ಯಂಗಳು ಮೊಜಿವುತಿರಲು ॥ ೯ ॥

ಗಾಳಿಯೊಳು ಸುಳಿಗಾಳಿಯೊಗೆದಾ
ಗಾಳಿಯೊಳು ತಾ ಮತ್ತೆ ಬೆರಸಿದ
ವೋಲುದಧಿಯೊಳು ನೊರೆಗಳೊಗೆದುದಧಿಯೊಳಡಗಿದಂತೆ ।
ಮೇಲೆ ನಭದೊಳೆಸೆದು ತಟಿಲ್ಲತೆ
ಮೇಲೆ ನಭದೊಳೆ ಹೊಳೆದಡಂಗಿದ
ವೋಲುದಕದಿಂದಾಲಿಕಲ್ಲೊಗೆದಲ್ಲಡಗಿದಂತೆ ॥ ೧೦ ॥

ಗುರುದಯಾ ಸಂಗತಿಯೊಳುದಯಿಸಿ
ಗುರುದಯಾಸಂಪದದಿ ವರ್ಧಿಸಿ
ಗುರುಜಠರ ವಿಶ್ರಾಂತಿಯಲಿ ತದ್ಗುರುವೆ ತಾನಾಗಿ ।
ಬೆರಸಿದನು ಶಿವಲಿಂಗತತ್ವದೊ
ಳರರೆ ಈಗಳಹಂಗೆಯೆಲ್ಲಾ
ಗುರುಚರಣವಂ ಭಜಿಪ ಭಕ್ತರ ಚಿತ್ತಪದ್ಮದಲಿ ॥ ೧೧ ॥

# ಅರ್ಥ ಸೂಚಿ

(ಪದಗಳ ಮುಂದಿರುವ ಸಂಖ್ಯೆಗಳಲ್ಲಿ ಮೊದಲನೆಯದು ಸಂಧಿಯನ್ನೂ ಎರಡನೆಯದು ಪದ್ಯವನ್ನೂ ಸೂಚಿಸುತ್ತದೆ.)

ಅ

ಅಂಕಕಾಱ (೪.೧೦) ಸೇವಕ
ಅನ್ವಯ (೩.೧೪) ವಂಶ
ಅರ್ಕ (೫.೩) ಸೂರ್ಯ
ಅಲಘು (೨.೭) ಹಗುರವಲ್ಲದ, ಶ್ರೇಷ್ಠ
ಅಸಮನೇತ್ರ (೫.೪೮) ಶಿವ
ಅಹರ್ಪತಿ (೭.೧೬) ದಿವಸದ ಒಡೆಯ, ಸೂರ್ಯ
ಅಳೆ (೪.೧೮) ಮಜ್ಜಿಗೆ

ಆ

ಆಭೀಳ (೭.೨೨) ಭಯಂಕರ

ಇ

ಇಂಡೆ (೧.೧೦) ಹೂವಿನ ಸರ

ಈ

ಈರೇಳು (೨.೧೪) ಹದಿನಾಲ್ಕು

ಉ

ಉಷ್ಟ್ರ (೬.೧೬) ಒಂಟೆ

ಎ

ಎಳೆಹೂಟೆ (೬.೨೦) ಹೂಟೆಗೆ ಕಟ್ಟಿ ನೆಲದ ಮೇಲೆ ಎಳೆಸುವುದು

ಏ

ಏಣಧರ (೫.೩೮) ಚಂದ್ರನನ್ನು ಧರಿಸಿದವನು, ಶಿವ

ಓ

ಓಳಿ (೭.೨೨) ಸಾಲು, ಗುಂಪು

ಕ

ಕಕುಭ (೨.೨೦) ದಿಕ್ಕು
ಕಜ್ಜಳ (೭.೨೧) ಕಪ್ಪು
ಕಬ್ಬಿಲಿಗ (೬.೧೫) ಬೇಡ
ಕರ್ಬೊನ್ನು (೭.೨೧) ಕಬ್ಬಿಣ
ಕವಳಿಗೆ (೫.೧೨) ಕಟ್ಟು, ಕಡತ
ಕಾಣಿ (೪.೨೯) ಒಂದು ಚಿಕ್ಕ ನಾಣ್ಯ
ಕೀರ (೬.೧೬) ಗಿಳಿ
ಕುರಂಗ (೬.೧೬) ಜಿಂಕೆ, ಸಾರಂಗ
ಕೃತಾಂತ (೮.೨೭) ಯಮ
ಕೇಳಿಕೆ (೨.೨೦) ಒಂದು ಬಗೆಯ ಬೀದಿಗುಣಿತ

ಖ

ಖಂಡಪರಶು (೭.೨೫) ಶಿವ

ಗ

ಗಂಗಾಜೂಟ (೫.೧೭) ಶಿವ
ಗರ್ದಭ (೬.೧೬) ಕತ್ತೆ

ಗರಳ (೭.೧೬) ಕೆತ್ತು
ಗಾಜುಸುಡಿ (೫.೨೭) ಬೈ, ತೆಗಳು
ಗುಡ (೧.೮) ಬೆಲ್ಲ
ಗೋತ್ರಪುತ್ರಿ (೮.೪೩) ಪಾರ್ವತಿ

## ಘ

ಘುಸಣಿ (೭.೬) ತೊಂದರೆ
ಘೃಣ (೩.೩೧) ದಯೆ
ಘೋಟಕ (೭.೩೪) ಕುದುರೆ

## ಚ

ಚಟುಲ (೭.೨೩) ನಡುಗುವ

## ಜ

ಜವ (೪.೨೭) ಯಮ
ಜ್ವಳನ (೭.೫) ಬೆಂಕಿ

## ಟ

ಟೊಕಳಿ (೭.೧೮) ಬರಡುಮಾತು

## ತ

ತಟಿಲ್ಲತೆ (೮.೧೦) ಮಿಂಚು
ತರಣಿ (೧.೪) ಸೂರ್ಯ
ತಸ್ಕರ (೪.೧) ಠಕ್ಕ, ಕಳ್ಳ
ತಿಮಿರ (೧.೨೧) ಕತ್ತಲೆ
ತ್ರಿವಿಧ (೫.೪೫) ಗುರು, ಲಿಂಗ, ಜಂಗಮ
ತೂರ್ಯ (೯.೯) ವಾದ್ಯ
ತೋಷಣ (೧.೧೧) ಸಂತೋಷ

## ದ

ದಂಡಿಗೆ (೬.೭) ಮೇನೆ, ಪಲ್ಲಕ್ಕಿ

ದರ್ದುಗ (೬.೧೬) ಕಪ್ಪೆ ?
ದುಹಿತೆ (೨.೧೬) ಮಗಳು

## ಧ

ಧನವರ (೩.೧೫) ಕುಬೇರ

## ನ

ನಾಗಮುಖ (೧.೨) ಗಣಪತಿ
ನಿಗುಳ್ (೫.೪) ನೀಳವಾಗು
ನಿಟಿಲನಯನ (೭.೨೩) ಶಿವ
ನಿಬ್ಬರ (೫.೧೫) ಆವೇಶ
ನೋಂಪಿ (೧.೫) ವ್ರತ

## ಪ

ಪಡಿಹಾರ (೨.೧೯) ಸೇವಕ
ಪಡಿಹಾರಿ (೫.೨೩) ಬಾಗಿಲು ಕಾಯುವವನು
ಪಸಾಯಿತ (೭.೩೧) ವಸ್ತ್ರಗಳನ್ನು ತಯಾರಿಸುವವನು
ಪ್ರಣಿಪತ್ತಿ (೬.೧) ನಮಸ್ಕಾರ
ಪಾರಕ (೮.೩೯) ದ್ವಾರಪಾಲಕ
ಪಾರ್ಬಿಕೆ (೨.೫) ಬ್ರಾಹ್ಮಣ್ಯ
ಪಾವಕ (೨.೧೦) ಬೆಂಕಿ
ಪೂತ (೫.೫) ಪವಿತ್ರ, ಶುದ್ಧ
ಪೊತ್ತಗೆ (೧.೬) ಗ್ರಂಥ
ಪೊಳಲು (೮.೧೯) ಊರು

## ಬ

ಬಗುತ (೬.೧೮) ಭಕ್ತ
ಬವರಿ (೧.೧೭) ಗುಂಗುರಾದ
ಬಹಿತ್ರ (೩.೨೫) ಹಡಗು
ಬಿದಿ (೨.೧೪) ಬ್ರಹ್ಮ

ಬುಧರು (೧.೭) ಪಂಡಿತರು, ವಿದ್ವಾಂಸರು
ಬೆಸನ (೧.೧೧) ಆಜ್ಞೆ
ಬೆಲೆವೆಣ್ಣು (೨.೧೨) ಸೂಳೆ
ಬೆಳ್ಳ (೪.೬) ಮುಗ್ಧ

### ಭ

ಭರ್ಗ (೬.೨೩) ಶಿವ
ಭಿತ್ತಿ (೭.೨೧) ಗೋಡೆ
ಭೂರುಹ (೮.೧೦) ಮರ
ಭೇಕ (೮.೮) ಕಪ್ಪೆ
ಭೋಗಿಶಯನ (೧.೨) ವಿಷ್ಣು

### ಮ

ಮಜ್ಜನ (೮.೬) ಅಭಿಷೇಕ
ಮಟ್ಟಗರು (೮೬.೨) ಲೌಕಿಕರು
ಮಣಿಹ (೫.೪೩) ಕಾರಣ
ಮಾತಂಗ (೭.೨೧) ಆನೆ
ಮುಖೋದ್ಗತ (೨.೧) ಕಂಠಪಾಠ
ಮೂಜಿವಸರ (೨.೨೬) ಬೆಳಿಗ್ಗೆ, ಮಧ್ಯಾಹ್ನ ಸಾಯಂಕಾಲಗಳೆಂಬ ಮೂರು ಕಾಲಗಳು
ಮೃಡ (೨.೧೧) ಶಿವ
ಮೋಹಳ (೪.೮) (ಖಡ್ಗ ಮುಂತಾದವುಗಳ) ಹಿಡಿ

### ಲ

ಲೋಚನವಾರಿ (೫.೨೨) ಕಣ್ಣೀರು

### ವ

ವತ್ಸನಾಭಿ (೭.೨೨) ಒಂದು ಬಗೆಯ ವಿಷ
ವೆಗ್ಗಳಿಸು (೫.೪೪) ಅಧಿಕವಾಗು

### ಶ

ಶತಪತ್ರಮಿತ್ರ (೮.೪೩) ಸೂರ್ಯ
ಶಶಾಂಕ (೮.೨) ಚಂದ್ರ
ಶಸ್ತ (೩.೨೧) ಶ್ರೇಷ್ಠವಾದ
ಶಿಖಿ (೨.೧೪) ಬೆಂಕಿ
ಶುಕ್ತಿ (೬.೧೪) ಚಿಪ್ಪು
ಶುನಕ (೬.೧೬) ನಾಯಿ

### ಷ

ಷಟ್ಕರ್ಮ (೧.೪) ಬ್ರಾಹ್ಮಣನ ಕರ್ತವ್ಯಗಳಾದ ಅಧ್ಯಯನ, ಅಧ್ಯಾಪನ, ಯಜನ, ಯಾಜನ ದಾನ ಮತ್ತು ಪ್ರತಿಗ್ರಹ

### ಸ

ಸಂಬೋಳಿ (೬.೪) ಹಿಂದಿನ ಕಾಲದಲ್ಲಿ ಹೊಲೆಯನು ಊರಲ್ಲಿ ಹೋಗುವಾಗ ಈ ರೀತಿ ಕೂಗುತ್ತಿದ್ದ
ಸಿತಾಂಬರ (೧.೧೬) ಬಿಳಿಯ ಬಟ್ಟೆ
ಸುಕೃತ (೧.೧೨) ಪುಣ್ಯ
ಸುರಭಿ (೩.೩೧) ಕಾಮಧೇನು
ಸುರಗಿ (೮.೯) ಒಂದು ಬಗೆಯ ಮರ
ಸೂಚಿಮುಖ (೧.೨೦) ಸೂಜಿಯ ಮೊನೆ
ಸೈಗೆಡೆ (೫.೪೧) ನಮಸ್ಕರಿಸು
ಸ್ಮೇರವದನ (೭.೨೪) ನಗುಮುಖ
ಸ್ರಾವೆ (೭.೨೬) ಪಾತ್ರೆ

### ಹ

ಹದುಳಿಸು (೫.೨೦) ಸಂತೋಷಪಡು
ಹಲ್ಲಣ (೭.೧೦) ಆನೆಯ ಮೇಲೆ ಹಾಕುವ ಅಲಂಕರಣ
ಹಾರು (೨.೧೩) ನಿರೀಕ್ಷಿಸು, ಬಯಸು
ಹುತವಹಾಂಬಕ (೫.೧೧) ಬೆಂಕಿಯ ಕಣ್ಣುಳ್ಳವನು, ಶಿವ
ಹೊಡವಡು (೫.೨೪) ನಮಸ್ಕರಿಸು
ಹೊಂತಕಾಱ (೫.೫೫) ಗಟ್ಟಿಗ